# ಬಿಲಾಲ್(ರ)

✍ ಶೈಖ್ ಮುಹಮ್ಮದ್ ಕಾರಕುನ್ನು

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಪ್ರವಾದಿ ಮುಹಮ್ಮದ್(ಸ) ಅವರ ಆಪ್ತ ಸಂಗಾತಿಗಳಲ್ಲೋರ್ವರಾದ ಬಿಲಾಲ್ ಬಿನ್ ರಬಾಹರ ಸಂಕ್ಷಿಪ್ತ ಜೀವನ ಗಾಥೆಯನ್ನು ವಾಚಕರ ಮುಂದಿಡುತ್ತಿದ್ದೇವೆ. ಮೈಯ ಚರ್ಮ ಕಪ್ಪಾದ ಮಾತ್ರಕ್ಕೆ ಮನುಷ್ಯರನ್ನು ಕೀಳಾಗಿ ಕಾಣುವ, ಅವರನ್ನು ಗುಲಾಮರನ್ನಾಗಿ ಪ್ರಾಣಿಗಳಂತೆ ಪೇಟೆಗಳಲ್ಲಿ ಮಾರಾಟ ಮಾಡಲ್ಪಡುವ, ಒಡೆಯನಿಚ್ಛೆಗೆ ವಿರುದ್ಧವಾಗಿ ಏನನ್ನೂ ಆಲೋಚಿಸಲಿಕ್ಕೂ ಸ್ವಾತಂತ್ರ್ಯವಿಲ್ಲದ, ಅವನ ಬೈಗುಳ ಹೊಡೆತಗಳಿಗೆ ಬಲಿಯಾದರೂ ಆತನಿಗಾಗಿ ಮಾತ್ರ ಜೀವ ಸವೆಸುವ, ಅದರ ವಿರುದ್ಧ ಉಸಿರೆತ್ತಲೂ ಸಾಧ್ಯವಿಲ್ಲದಂತಹ ಒಂದು ಸಮಾಜದಲ್ಲಿ ಹುಟ್ಟಿನಿಂದಲೇ ಗುಲಾಮರಾಗಿ ಬೆಳೆದ ಬದುಕು ಇಥಿಯೋಪಿಯಾದ ಆ ಕರಿಯ ಗುಲಾಮ ಬಿಲಾಲ್(ರ)ರದ್ದಾಗಿತ್ತು. ಆದರೆ ಪ್ರವಾದಿ ಮುಹಮ್ಮದ್(ಸ) ಅವರು ಸತ್ಯ ಸಂದೇಶವನ್ನು ಮಕ್ಕಾದಲ್ಲಿ ಸಾರತೊಡಗಿದ ಆರಂಭದಲ್ಲೇ ಆ ಕರೆಗೆ ಓಗೊಟ್ಟು, ಮಾನವ ಪ್ರಭುತ್ವವನ್ನು ಧಿಕ್ಕರಿಸಿ ಸರ್ವಲೋಕಗಳ ಪ್ರಭುವಾದ ಅಲ್ಲಾಹನಿಗೆ ತನ್ನ ಬದುಕನ್ನು ಅರ್ಪಿಸಿದಾಗಿನಿಂದ ಅವರು ಸ್ವಾತಂತ್ರ್ಯದ ಸವಿಯನ್ನು ಅನುಭವಿಸತೊಡಗಿದರು.

ಇಸ್ಲಾಮ್ ದೀನ-ದಲಿತರ, ಅಸಹಾಯಕರ, ಶೋಷಿತರ, ಅಸ್ಪೃಶತೆ ಮತ್ತು ಅಸಮಾನತೆಯಿಂದಾಗಿ ತುಳಿತಕ್ಕೊಳಗಾದವರ ವಿಮೋಚನಾ ಆಂದೋಲನವೆಂಬುದನ್ನು ಕಾರ್ಯತಃ ಸಾಧಿಸಿ ತೋರಿಸಿರುವುದಕ್ಕೆ ಬಿಲಾಲ್‌ರು(ರ) ಜ್ವಲಂತ ಸಾಕ್ಷಿಯಾಗಿದ್ದಾರೆ. ಬಿಲಾಲ್(ರ) ಕೇವಲ ಓರ್ವ ವ್ಯಕ್ತಿಯಲ್ಲ, ಲೋಕಾಂತ್ಯದವರೆಗೂ ಮರ್ದಿತರ, ಶೋಷಿತರ, ದೀನ-ದಲಿತರ ಸ್ವಾತಂತ್ರ್ಯದ ಸ್ಫೂರ್ತಿಯ ಸೆಲೆಯಾಗಿದ್ದಾರೆ. ಅಸ್ಪೃಶತೆ, ಅಸಮಾನತೆ ಮತ್ತು ಉಚ್ಚ-ನೀಚತೆಯ ಪಾತಾಳದಿಂದ ಮಾನವತೆಯ ಅತ್ಯುನ್ನತ ಶಿಖರಕ್ಕೇರಿದ ಮಹಾ ಸೌಭಾಗ್ಯವಂತ, ಸತ್ಯಮಾರ್ಗದಲ್ಲಿ ಅವರು ತೀವ್ರ ಅಗ್ನಿ ಪರೀಕ್ಷೆಗಳನ್ನು ಎದುರಿಸಿದರು. ಹಿಂಸೆ-ದೌರ್ಜನ್ಯಗಳಿಂದ ಶರೀರವು ಜರ್ಝರಿತವಾಗಿದ್ದರೂ ಅವರ ಮನಸ್ಸು ಪರಲೋಕದ ಶಾಶ್ವತ ಸುಖ ಸೌಭಾಗ್ಯಗಳನ್ನು ನೆನೆದು ಹಗುರವಾಗುತ್ತಿತ್ತು.

ಕೇರಳದ ಸುಪ್ರಸಿದ್ಧ ವಾಗ್ಮಿ, ಗ್ರಂಥಕರ್ತ ಹಾಗೂ ಸಾಹಿತಿ ಶೈಖ್ ಮುಹಮ್ಮದ್ ಕಾರಕುನ್ನು ಅವರು ಬಿಲಾಲ್‌ರ(ರ) ಉಜ್ವಲ ಬದುಕಿನ ಕುರಿತು ಸಂಕ್ಷಿಪ್ತವಾಗಿ ಈ ಕೃತಿಯಲ್ಲಿ ಬೆಳಕು ಚೆಲ್ಲಿದ್ದಾರೆ. ಸಮೀನ ಉಪ್ಪಿನಂಗಡಿಯವರು ಅವರ ಮಲಯಾಳಮ್ ಕೃತಿಯನ್ನು ಸುಂದರವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಮೂಲ ಲೇಖಕನ ನಿರೂಪಣಾ ಶೈಲಿಗೆ ಚ್ಯುತಿ ಬಾರದಂತೆ ಅನುವಾದಿಸಿರುವುದು ವಿಶೇಷ. ಇದರ ಅಧ್ಯಯನದಿಂದ ಅಸ್ಪೃಶ್ಯತೆ-ಅಸಮಾನತೆ, ಶೋಷಣೆಯ ವಿರುದ್ಧ ಹೋರಾಡುವವರಿಗೆ ಸ್ಫೂರ್ತಿ ಲಭಿಸುವುದೆಂದು ಹಾರೈಸುತ್ತೇವೆ.

— ಶಾಂತಿ ಪ್ರಕಾಶನ

ಹ. ಬಿಲಾಲ್(ರ) ಇತಿಹಾಸದಲ್ಲಿ ಒಂದು ಮಹಾನ್ ಜ್ಯೋತಿಯಾಗಿದ್ದಾರೆ. ಇಸ್ಲಾಮ್ ಸ್ವೀಕಾರದಿಂದ ಸ್ವಾತಂತ್ರ್ಯದ ರುಚಿ ಅನುಭವಿಸಿದ ಇತಿಯೋಪಿಯಾದ ಕರಿಯ ಗುಲಾಮ. ಸತ್ಯವಿಶ್ವಾಸದ ಮಾಂತ್ರಿಕ ಸ್ಪರ್ಶದಿಂದ ಬಿಲಾಲ್‌ರ ಹೃದಯವು ಕಂಪಿಸಿತು. ಕುರೈಶಿ ಪ್ರಮುಖರೊಂದಿಗೆ ಸೇರಿ ಉನ್ನತಿಯ ಶಿಖರಕ್ಕೆ ಸಾಗಿದ ಅವರ ಕಥೆ ಬಹಳ ರೋಚಕವಾದುದು. ಪ್ರಥಮವಾಗಿ ಮಸೀದಿಯ ಮಿನಾರಗಳಿಂದ ದೇವನ ಏಕತ್ವದ ಕರೆ ಮೊಳಗಿಸಿದ ಆ ಪ್ರವಾದಿ ಸಂಗಾತಿಯ ಜೀವನಗಾಥೆಯನ್ನು ಸರಳ ಭಾಷೆಯಲ್ಲಿ ಹೃದಯ ಸ್ಪರ್ಶಿಯಾಗಿ ತೆರೆದಿಡುವ ಕೃತಿಯಾಗಿದೆ 'ಬಿಲಾಲ್(ರ).'

# ಎರಡು ಮಾತು

ಬಾಲ್ಯಕಾಲದಲ್ಲಿ ರಾತ್ರಿಯ ಧಾರ್ಮಿಕ ಪ್ರವಚನಗಳಲ್ಲಿ ಹಝ್ರತ್ ಬಿಲಾಲ್‌ರು(ರ) ಅನುಭವಿಸಿದ ಕ್ರೂರ ಹಿಂಸೆ ದೌರ್ಜನ್ಯಗಳ ವಿವರಣೆಯನ್ನು ಕೇಳಿ ಕಣ್ಣು ಮಂಜಾದದ್ದಿದೆ. ಅದು ಮಾನವಕುಲದ ವಿಮೋಚನೆಗಾಗಿ ಹೋರಾಡಲು ಯತ್ನಿಸಿದ ಹೋರಾಟಗಾರರು ಅನಿವಾರ್ಯವಾಗಿ ಎದುರಿಸಲೇ ಬೇಕಾಗಿರುವ ದೌರ್ಜನ್ಯಗಳ ಭಾಗವೆಂದು ಅಂದು ನನಗೆ ತಿಳಿದಿರಲಿಲ್ಲ.

ಚರಿತ್ರೆಯನ್ನು ತಿದ್ದಿ ಬರೆಸಿ, ಕೆಟ್ಟ ವ್ಯವಸ್ಥೆಯ ವಿರುದ್ಧ ದಿಟ್ಟತನದಿಂದ ಹೋರಾಡುವ ವೀರಯೋಧರು ಇಂತಹ ಮರ್ದನಗಳಿಗೆ ತಲೆ ಬಾಗಬೇಕಾಗುತ್ತದೆ. ಕ್ರಾಂತಿಕಾರಿ ಶಕ್ತಿಗಳಾಗಲು ತೀರ್ಮಾನಿಸಿದ ಬಿಲಾಲ್ ಮತ್ತು ಸಂಗಡಿಗರು ಹೋರಾಟದ ಕರ್ಮಭೂಮಿಗೆ ಧುಮುಕಿದರು. ಒಂದು ಉದಾತ್ತವಾದ ಆದರ್ಶ ಇದಕ್ಕೆ ಪ್ರೇರಕವಾಗಿತ್ತು. ನರಕದ ಭಯ, ಸ್ವರ್ಗದ ಆಸೆ ಹಾಗೂ ಸಹಜೀವಿಗಳೊಂದಿಗಿನ ಪ್ರೀತಿ ಅವರಲ್ಲಿ ತುಂಬಿ ಬಂತು. ಕೊನೆಗೆ ಅವರ ಭಾವನೆಗಳು, ನಿಟ್ಟುಸಿರು, ರಾತ್ರಿಯ ಪ್ರಾರ್ಥನೆ ಹಾಗೂ ಹಗಲಿನ ಕಠಿಣ ದುಡಿಮೆ ವಿಮೋಚನೆಗೆ ಹಾದಿ ಸುಗಮಗೊಳಿಸಿತು. ಮೂಢನಂಬಿಕೆ, ಕಂದಾಚಾರ, ಅನೀತಿ, ಅನ್ಯಾಯ, ಗುಲಾಮಗಿರಿ, ಅಸಮಾನತೆ, ಪೌರೋಹಿತ್ಯ, ಅಧಿಕಾರ ಶಾಹಿ ಶಕ್ತಿಗಳು ನರಕ, ದೇವಕ್ರೋಧ ಹೀಗೆ ಎಲ್ಲದರಿಂದಲೂ ವಿಮೋಚನೆ ದೊರೆಯಿತು. ಅವರಿಗೆ ಮಾತ್ರವಲ್ಲ; ಇಡೀ ವಿಶ್ವದ ಮರ್ದಿತ ಜನಾಂಗಕ್ಕೆ ವಿಮೋಚನೆ ದೊರೆಯಿತು! ಹೀಗೆ ಅವರ ನೋವುಗಳು ಇತಿಹಾಸವನ್ನು ಬದಲಿಸುವ ಹೆರಿಗೆ ನೋವಾಗಿ ಪರಿವರ್ತನೆಗೊಂಡಿತು.

ಬಿಲಾಲ್(ರ) ಸ್ವಾತಂತ್ರ್ಯದ ಪ್ರತೀಕವಾಗಿದ್ದಾರೆ. ಅವರು ಕಪ್ಪು ವರ್ಣದವರಾಗಿದ್ದರು. ಇಪ್ಪತ್ತನೆಯ ಶತಮಾನದ ಕೊನೆಯಲ್ಲೂ ಕರಿಬಣ್ಣವೆಂಬುದು ದಾಸ್ಯದ ಹಾಗೂ ಅಸ್ಪೃಶ್ಯತೆಯ ಚಿಹ್ನೆಯಾಗಿದೆ. ಅವರು ಗುಲಾಮರಾಗಿದ್ದರು. ಸಂತೆಯಲ್ಲಿ ಮಾರಾಟವಾಗುತ್ತಿದ್ದ ವ್ಯಾಪಾರ ಸರಕು! ಈ ಕೆಳಹಂತದಿಂದ ಅವರು ಮಾನವ ಇತಿಹಾಸದಲ್ಲೇ ಅತ್ಯುನ್ನತಿಯೆಡೆಗೆ ಏರಿದರು. ಇಸ್ಲಾಮ್ ಧರ್ಮವು ಅವರಿಗೆ ಹಾದಿ ತೋರಿಸಿತು. ಇದಕ್ಕೆ ಈ ಕೃತಿಯಲ್ಲಿ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿದೆ.

ಅಲ್ಲಾಹನು ಇದನ್ನು ಸತ್ಕರ್ಮವಾಗಿ ಸ್ವೀಕರಿಸಿ ಸೂಕ್ತ ಪ್ರತಿಫಲವನ್ನು ನೀಡಲಿ.

**ಶೈಕ್ ಮುಹಮ್ಮದ್ ಕಾರಕುನ್ನು**

# ಅನುಕ್ರಮಣಿಕೆ

# ಹೊಸ ಗೆಳೆಯ

'ನಿನ್ನ ಗಾನ ಎಷ್ಟು ಮನೋಹರ! ಎಂಥ ಸುಮಧುರ ಕಂಠ! ಇಷ್ಟು ಸುಂದರವಾಗಿ ಹಾಡುವ ಯಾರನ್ನೂ ನಾನು ಇದುವರೆಗೆ ಕಂಡಿಲ್ಲ.'

ಅಬೂಬಕರ್‌ರ(ರ) ಮಾತುಗಳು ಬಿಲಾಲ್‌ರನ್ನು(ರ) ಹರ್ಷಪುಳಕಿತಗೊಳಿಸಿತು. ಅವರು ಜೀವನದಲ್ಲಿ ಅದುವರೆಗೆ ಅನುಭವಿಸದ ಆನಂದವನ್ನು ಪಡೆದರು. ತನ್ನನ್ನು ಹೊಗಳುವುದು! ಮುಖನೋಡಿ ಪ್ರಶಂಶೆ ವ್ಯಕ್ತಪಡಿಸುವುದು! ಅದೂ ಕೂಡಾ ಪ್ರಮುಖ ವ್ಯಾಪಾರಿಯಾಗಿರುವ ಅಬೂಬಕರ್(ರ). ಕುರೈಶಿ ಗೋತ್ರದ ಉನ್ನತ ಕುಟುಂಬದ ಅಬೂಕುಹಾಫರ ಮಗ! ಬಿಲಾಲ್‌ರಿಗೆ(ರ) ನಂಬಲು ಸಾಧ್ಯವಾಗಲಿಲ್ಲ, ತಾನು ಇದಕ್ಕಿಂತಲೂ ಸುಂದರವಾಗಿ ಹಲವು ಬಾರಿ ಹಾಡಿದ್ದೇನೆ. ಉಮಯ್ಯರಿಗೆ ನಿದ್ದೆ ಬಾರದ ರಾತ್ರಿಗಳಲ್ಲಿ ಅವರ ಇಂಗಿತದಂತೆ ಅದೆಷ್ಟೋ ಬಾರಿ! ಅಂದೆಲ್ಲಾ ಅಭಿನಂದನೆಯ ಒಂದಕ್ಷರವನ್ನೂ ಆಲಿಸಿಲ್ಲ, ಕುರೈಶರು ಸೇರುವಲ್ಲಿ ಅವರ ಆಜ್ಞೆಯಂತೆ ಹಾಡಿದ್ದೇನೆ. ಆಗೆಲ್ಲ ಸಂತೋಷಗೊಳಿಸುವ ಒಂದು ವಾಕ್ಯ ಕೂಡಾ ಅವರ ನಾಲಗೆಯಿಂದ ಹೊರಬಂದಿಲ್ಲ.

ಹಗಲಿಡೀ ಕಠಿಣವಾಗಿ ದುಡಿದರೂ ಕೃತಜ್ಞತೆಯ ಭಾವವಿಲ್ಲ, ತೀಕ್ಷ್ಣ ಸೂರ್ಯತಾಪವನ್ನು ಸಹಿಸಿ ಮರುಭೂಮಿಯಲ್ಲಿ ಒಂಟೆಯನ್ನು ಮೇಯಿಸಿ, ಮರಳಿದಾಗಲೂ ಯಜಮಾನನ ಮುಖದಲ್ಲಿ ಪ್ರಸನ್ನತೆ ಪ್ರಕಟವಾಗಿಲ್ಲ, ಅಂತಹ ಸೌಭಾಗ್ಯ ಲಭಿಸಿಯೇ ಇಲ್ಲ, ಅಲ್ಲದಿದ್ದರೂ ಗುಲಾಮನನ್ನು ಯಾರು ಹೊಗಳುತ್ತಾರೆ? ಅಭಿನಂದನೆ, ಕೃತಜ್ಞತೆ, ಒಳ್ಳೆಯ ಮಾತು; ಇವೆಲ್ಲವೂ ಅವನಿಗೆ ನಿಷಿದ್ಧವಲ್ಲವೇ? ನಿಷಿದ್ಧ ಫಲಗಳು! ಹೊಡೆತ, ಬಡಿತ, ಬೈಗುಳ ತಿನ್ನಬೇಕಾದವನು. ಯಜಮಾನನ ಬಾಯಿಯಿಂದ ಉದುರುವ ಅಸಭ್ಯ, ಅಸಹ್ಯ ಮಾತುಗಳನ್ನು ಕೇಳಬೇಕಾದವನು. ಆತನ ಲಾಠಿಯೇಟಿಗೆ ಬೆನ್ನು ತೋರಿಸಬೇಕಾದವನು. ಆತನ ಕೃತಜ್ಞತೆಯ ಮಾತನ್ನು ನಿರೀಕ್ಷಿಸುವುದು ಕೂಡಾ ಒಂದು ಅಪರಾಧವಾಗಿದೆ!

ಬಿಲಾಲ್(ರ) ಭೂಮಿಯಲ್ಲಿ ಗುಲಾಮನಾಗಿಯೇ ಕಣ್ಣು ತೆರೆದರು. ಅದು ಅವರಿಗೆ ವಂಶಪಾರಂಪರ್ಯವಾಗಿ ಲಭಿಸಿತ್ತು. ಗುಲಾಮ ತಂದೆತಾಯಿಗಳ ಮಗನಾದ್ದರಿಂದ ಅವನೂ

ಗುಲಾಮ! ತಂದೆ ರಬಾಹ್ ಮತ್ತು ತಾಯಿ ಹಮಾಮ ಅರೇಬಿಯಾದ ಗುಲಾಮರ ಸಂತೆಯಲ್ಲಿ ಹಲವು ವರ್ಷ ಜಾನುವಾರುಗಳಂತೆ ಮಾರಾಟವಾದವರು. ಪ್ರವಾದಿ ಮುಹಮ್ಮದ್‌ರ(ಸ) ಜನನದ 10 ವರ್ಷಗಳ ಬಳಿಕ ಜನಿಸಿದ ಬಿಲಾಲ್(ರ), ಉಮಯ್ಯ ಎಂಬವರ ಗುಲಾಮರಾಗಿದ್ದರು. ಅವರ 12 ಗುಲಾಮರಲ್ಲಿ ಬಿಲಾಲ್(ರ) ಕೂಡಾ ಒಬ್ಬರು.

ಬಿಲಾಲ್‌ರ(ರ) ತಂದೆಯಾಗಿದ್ದ ರಬಾಹ್‌ರನ್ನು ಖಲಫ್ ಬಿನ್ ವಹಬ್ ಗುಲಾಮಿ ಸಂತೆಯಿಂದ ಖರೀದಿಸಿದ್ದರು. ತಾಯಿ ಹಮಾಮ ಮೊದಲೇ ಅವರ ಗುಲಾಮಿ ಪಾಳಯದಲ್ಲಿದ್ದರು. ಹೀಗೆ ಬಿಲಾಲ್‌ರು(ರ) ಖಲಫ್‌ರ ಮಗ ಉಮಯ್ಯರ ಗುಲಾಮರಾದರು.

ಗುಲಾಮರೆಂದರೆ ಯಾರು? ಇತಿಹಾಸಕ್ಕೆ ಅವರ ಬಗ್ಗೆ ಚೆನ್ನಾಗಿ ಅರಿವಿದೆ. ಕಾರಣವೇನೆಂದರೆ ಅವರೇ ಇತಿಹಾಸವನ್ನು ರಚಿಸಿದವರು. ಚರಿತ್ರೆ ನಿರ್ಮಿಸಿದ್ದು ಅವರನ್ನು ಗುಲಾಮರಾಗಿಸಿದವರಾದರೂ ಗುಲಾಮರೇ ಇತಿಹಾಸದ ನಿರ್ಮಾತೃ. ಪ್ರಸಿದ್ಧ ನಾಗರಿಕತೆಗಳು ಹಾಗೂ ಸಂಸ್ಕೃತಿಗಳು ಕರಿಯ ಗುಲಾಮರ ಕಥೆಯನ್ನೇ ಸಾರುತ್ತಿದೆ. ವಿಶ್ವದ ಅದ್ಭುತಗಳಲ್ಲಿ ಹೆಚ್ಚಾಗಿ ಅವರ ರಕ್ತದ ಕಲೆಗಳ ಸಿಂಚನವಿದೆ. ಗುಲಾಮರ ಆಕ್ರಂದನ, ಬಿಸಿ ನಿಟ್ಟುಸಿರು ಹಾಗೂ ಮನೋವ್ಯಥೆಗಳು ತುಂಬಿರದ ಉತ್ತುಂಗ ಭವನಗಳು ವಿರಳವಾಗಿದೆ. ಈಜಿಪ್ಟ್‌ನ ಪಿರಮಿಡ್‌ಗಳು, ಆಗ್ರಾದ ತಾಜ್‌ಮಹಲ್‌ನಂತಹವುಗಳು ಬಾಯಿಮುಚ್ಚಿ ಕೆಲಸ ಮಾಡಲು ನಿರ್ಬಂಧಿತರಾದ ಗುಲಾಮರ ಸ್ಮಾರಕಗಳಾಗಿವೆ. ಅದರ ಭಾರವಾದ ಸ್ತಂಭಗಳನ್ನು ಅತಿ ಮನೋಹರವಾಗಿ ನಿರ್ಮಿಸಿದವರು ಅವರೇ. ಅವುಗಳನ್ನು ಹೊತ್ತು ತಂದ ಗಾಯದ ಕಲೆಗಳು ಅವರ ಬೆನ್ನಿನ ಮೇಲೆ ಅಚ್ಚೊತ್ತಿದೆ. ಅವುಗಳಡಿಯಲ್ಲಿ ಸಿಲುಕಿ ಸಾವನಪ್ಪಿದವರೂ ಅದೇ ವರ್ಗದವರು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಪ್ರಪಂಚದ ನಯನ ಮನೋಹರವಾದ ಸೌಧಗಳ ನಿರ್ಮಾತೃಗಳು ಕರಿಯ ಬಣ್ಣದ ಹೃದಯ ಬಿಳಿಯಾಗಿರುವ ಕಪ್ಪು ಮನುಷ್ಯರು!

ಗುಲಾಮರು ನಿಕೃಷ್ಟರು. ಉಪ್ಪು ಸಕ್ಕರೆಯಂತೆ ಅಂಗಡಿಯಲ್ಲಿ ಮಾರಾಟವಾಗುವವರು. ಹಗಲಿರುಳೆಂಬ ವ್ಯತ್ಯಾಸವಿಲ್ಲದೆ ಕೇವಲ ದುಡಿಯಲಿಕ್ಕಾಗಿ ಜನ್ಮ ತಾಳಿದವರು. ಸಂಪಾದನೆಯಾಗಿ ದೇಹವಿಡೀ ಲಾಠಿಯೇಟಿನ ಕಲೆಗಳು. ಮುಖದಲ್ಲಿ ಕಾದ ಕಬ್ಬಿಣದ ಸರಳುಗಳಿಂದ ಸುಟ್ಟ ಗಾಯಗಳನ್ನು ಪಡೆದವರು! ನಡೆಯುವುದು, ಕುಳಿತುಕೊಳ್ಳುವುದು, ಮಲಗುವುದು ಮಾತ್ರವಲ್ಲ ಆಚಾರ ವಿಚಾರಗಳ ಸಹಿತ ಎಲ್ಲವೂ ನಿಯಂತ್ರಿಸಲ್ಪಟ್ಟವರು! ತನ್ನ ಯಜಮಾನ ಅದಕ್ಕಾಗಿ ಬೇರೆ ಯಾರಿಗೋ ಬೇಕಾದಷ್ಟು ಹಣ ನೀಡಿದ್ದಾನೆ!

ಬಿಲಾಲ್(ರ) ಕೂಡಾ ಅವರ ಪೂರ್ವಿಕರಂತೆ ಇತಿಹಾಸದ ಪುಟದಿಂದ ಮರೆಯಾಗುತ್ತಿದ್ದರು. ಸೊಂಟ ಮುರಿಯುವಂತೆ ದುಡಿದು ಯಾರಿಂದಲೂ ಗಮನಿಸಲ್ಪಡದ

ಹಿರಿಯರಂತೆ ತಾವೂ ಮಣ್ಣಿನಲ್ಲಿ ಲೀನರಾಗುತ್ತಿದ್ದರು. ಏಕೆಂದರೆ ಅವರು ಕೂಡಾ ಆಲೋಚಿಸುವ, ನಗುವ, ಮಾತನಾಡುವ, ಅಳುವ ಸ್ವಾತಂತ್ರವಿಲ್ಲದ ಗುಲಾಮರಾಗಿದ್ದರು.

ಬಿಲಾಲ್‌ರ(ರ) ಬಣ್ಣ ಇದ್ದಲಿನಂತೆ ಕಪ್ಪಾಗಿತ್ತು. ಕಡೆಗಣಿಸಲ್ಪಡಲು ಇನ್ನೇನು ಬೇಕು? ಸಮಾಜವು ಎಲ್ಲಾ ಕಾಲಗಳಲ್ಲೂ ಕರಿಯರನ್ನು ದಮನಿಸಲು ಪ್ರಯತ್ನಿಸಿದೆ. ಆಧುನಿಕ ಜಗತ್ತಿನಲ್ಲೂ ಬಿಳಿಯರಿಗೆ ಕರಿಯರೆಂದರೆ ತುಚ್ಛ ಭಾವನೆ. ಆತನನ್ನು ತನ್ನ ಬಳಿ ಕುಳ್ಳಿರಿಸಲು ಅಥವಾ ಮನುಷ್ಯನೆಂದು ಪರಿಗಣಿಸಲು ಬಿಳಿಯನು ಸಿದ್ಧನಿಲ್ಲ. ಪ್ರಗತಿಯ ತುತ್ತತುದಿಯಲ್ಲಿದ್ದೇವೆಂದು ಹೆಮ್ಮೆಪಡುವ ಪಾಶ್ಚಾತ್ಯಲೋಕದಲ್ಲಿ ಕರಿಯನಿಗಿಂತ ನಾಯಿಗಳೇ ಮೇಲು. ಅವು ಬಿಳಿಯನ ಮನೆ, ವಿಶ್ವ ವಿದ್ಯಾನಿಲಯಗಳಲ್ಲಿ ಸಂತೋಷದಿಂದ ವಿಹರಿಸಬಹುದು. ಕರಿಯರಿಗೆ ಅದು ಸಾಧ್ಯವಿಲ್ಲ. ಆಧುನಿಕ ಕ್ರಾಂತಿಯ ಪಿತಾಮಹನೆಂದು ಗುರುತಿಸಲ್ಪಡುವ ಕಾರ್ಲ್‌ಮಾರ್ಕ್ಸ್, ಮಗಳ ಪ್ರಿಯಕರ ಕರಿಯನೆಂಬ ಕಾರಣಕ್ಕೆ ವಿವಾಹ ಮಾಡಿಕೊಡಲಿಲ್ಲ ಎನ್ನಲಾಗುತ್ತಿದೆ.

ಬಿಲಾಲ್ ವಿದೇಶಿಯರಾಗಿದ್ದರು. ಮಕ್ಕಾದಲ್ಲಿ ಜನಿಸಿದ್ದರೂ ಅವರ ವಂಶವೃಕ್ಷದ ಬೇರುಗಳು ಇತಿಯೋಪಿಯವನ್ನು ತಲುಪುತ್ತದೆ. ಅವರು ಆಫ್ರಿಕಾದ ಹೃದಯ ಭಾಗದಲ್ಲಿ ನೆಲೆಸಿದ್ದರು. ಅಲ್ಲಿ ಪುರಾತನ ಕಾಲದಿಂದಲೂ ಅಜ್ಞಾನ, ಮೂಢನಂಬಿಕೆ ಹಾಗೂ ಕಂದಾಚಾರಗಳೇ ಆಡಳಿತ ನಡೆಸುತ್ತಿತ್ತು. ಆರ್ಥಿಕ ಹಾಗೂ ಸಾಮಾಜಿಕ ಅಧಃಪತನವು ಇತಿಯೋಪಿಯಾವನ್ನು ಹೆಚ್ಚಿನ ಎಲ್ಲ ಕಾಲದಲ್ಲೂ ನಡುಗಿಸುತ್ತಿತ್ತು. ಇಸ್ಲಾಮಿನ ಆಗಮನ ಕಾಲದಲ್ಲಿ ಅಲ್ಲಿ ಕ್ರೈಸ್ತ ಧರ್ಮದ ಆಧಿಪತ್ಯವಿತ್ತು. ಇದರಿಂದ ಬಹುದೇವ ವಿಶ್ವಾಸಿಗಳು ಪ್ರಗತಿ ಹೊಂದಲಿಲ್ಲ. ಅವರು ಧೈರ್ಯ, ಸ್ಥೈರ್ಯ, ಸ್ವಾತಂತ್ರ ಪ್ರಜ್ಞೆಯನ್ನು ಕಳೆದುಕೊಂಡರು. ಆದ್ದರಿಂದ ಅದು ದರೋಡೆಕೋರರ ಸ್ವರ್ಗವಾಗಿತ್ತು. ಅವರು ಇತಿಯೋಪಿಯಾದ ಕಪ್ಪು ಜನರನ್ನು ಹಿಡಿದು ತಂದು ಸಂತೆಯಲ್ಲಿ ಮಾರಾಟ ಮಾಡಿದರು. ಮನಸ್ಸು, ಮಾಂಸ, ಮಜ್ಜೆಗಳಿರುವ ಮನುಷ್ಯರನ್ನು ಜಾನುವಾರುಗಳಂತೆ ಸಾಗಿಸಲಾಯಿತು. ಗುಲಾಮರೆಂದು ಗುರುತು ಸಿಗಲು ಕಾದ ಕಬ್ಬಿಣದಿಂದ ಶರೀರಕ್ಕೆ ಹಚ್ಚೆ ಹಾಕಲಾಗುತ್ತಿತ್ತು. ಬಳಿಕ ಅವರನ್ನು ಮಾರುಕಟ್ಟೆಗೆ ಬಿಡುಗಡೆಗೊಳಿಸಲಾಗುತ್ತಿತ್ತು. ಬಿಲಾಲ್‌ರ(ರ) ತಂದೆ ರಬಾಹ್ ಕೂಡ ಈ ರೀತಿ ಸಂತೆಗೆ ಸಾಗಿಸಲ್ಪಟ್ಟವರಾಗಿದ್ದರು.

ಬಾಲ್ಯದಲ್ಲಿ ಬಿಲಾಲ್‌ರಿಗೆ(ರ) ಮನೆ ಕೆಲಸ ನೀಡಲಾಗಿತ್ತು. ಬಳಿಕ ಒಂಟೆಯನ್ನು ಮೇಯಿಸುವ ಹೊಣೆಯನ್ನು ನೀಡಲಾಯಿತು. ಅದು ಅವರ ಜೀವನದ ಕರಾಳ ಅಧ್ಯಾಯವಾಗಿತ್ತು. ಕುದಿಯುತ್ತಿರುವ ಮರಳ ರಾಶಿಯಲ್ಲಿ ಒಂಟೆಯ ಹಿಂದೆ ನಡೆಯುವುದೇ ಭಯಾನಕ ಶಿಕ್ಷೆಯಾಗಿತ್ತು. ಅಂದಿನ ದಿನಗಳಲ್ಲಿ ಹಗಲನ್ನು ನೆನೆಸುವುದೇ ಅವರಿಗೆ ಭಯವಾಗಿತ್ತು. ಸೂರ್ಯೋದಯವಾಗದಿರಲು ಎಲ್ಲ ಗುಲಾಮರಂತೆ ಇವರೂ

ಪ್ರಾರ್ಥಿಸುತ್ತಿದ್ದರು. ಆ ಧಗಧಗಿಸುವ ಬಿಸಿಲಿನಲ್ಲಿ ಅವರಿಗೆ ಖರ್ಜೂರದ ಮರಗಳ ನೆರಳೇ ಏಕೈಕ ಆಶ್ರಯವಾಗಿತ್ತು. ಆದರೆ ನೆರಳಿನಲ್ಲಿ ಕುಳಿತುಕೊಳ್ಳುವ ವಿಷಯ ಯಜಮಾನನಿಗೆ ತಿಳಿಯಬಾರದು. ತಿಳಿದರೆ ಲಾಠಿಯ ಪೆಟ್ಟು ಬೆನ್ನಿನಲ್ಲಿ ಚಿತ್ರವನ್ನು ಮೂಡಿಸುತ್ತಿತ್ತು. ಸೂರ್ಯನ ತೀವ್ರ ತಾಪದ ಕೆಳಗೆ, ಕಿರಣಗಳ ತೀಕ್ಷ್ಣತೆಗೆ ಜ್ವಾಲೆಯನ್ನು ಹೊರಸೂಸುವಂತಿದ್ದ ಕಲ್ಲು ಗುಡ್ಡಗಳ ಮೇಲೆ ಮೇಯಿಸುತ್ತಾ ನಡೆಯುತ್ತಿದ್ದ ದಿನಗಳು ಬಿಲಾಲ್‌ರ(ರ) ಮನದಲ್ಲಿ ಅಚ್ಚಳಿಯದೆ ನಿಂತಿತ್ತು. ರೋಮವನ್ನು ಕರಟಿಸುವ ಬಿಸಿಲಲ್ಲಿ, ಹಸಿವೆ, ದಾಹದಿಂದ ನರಳಿದ ದೀರ್ಘ ಹಗಲುಗಳು ಹೃದಯ ಭೇದಕವಾದ ಭಯಾನಕ ನೆನಪುಗಳಾಗಿದ್ದವು. ಹೀಗಿದ್ದರೂ ಬಿಲಾಲ್ ಹಾಡಿದರು. ಅವರ ಇಂಪಾದ ಗಾನಗಳಿಂದ ಮಕ್ಕಾದ ಮರಳ ಕಣಗಳು ಪುಳಕಿತಗೊಂಡವು. ಅರೇಬಿಯಾದ ಖರ್ಜೂರದ ತೋಪುಗಳು ಅವರ ಚೇತೋಹಾರಿಯಾದ ಹಾಡನ್ನು ಆಲಿಸಿದವು. ಅಂದು ಬಿಲಾಲ್‌ರಿಗೆ(ರ) ಹಾಡದಿರಲು ಸಾಧ್ಯವಾಗಿರಲಿಲ್ಲ. ಜನ್ಮತಃ ಲಭಿಸಿದ ಅನುಗ್ರಹೀತ ಸ್ವರ ಮಾಧುರ್ಯವನ್ನು ಅಡಗಿಸಲು ಸಂಗಾತಿಗಳು ಅನುಮತಿ ನೀಡಿರಲಿಲ್ಲ.

ಪ್ರಕೃತಿ ರಮಣೀಯವಾದ ಸಿರಿಯನ್ ಭೂಪ್ರದೇಶದ ಪ್ರಯಾಣ ಬಿಲಾಲ್‌ರನ್ನು ಸಂತೋಷ ಸಾಗರದಲ್ಲಿ ತೇಲಾಡಿಸಿತು. ಅದು ಅರೇಬಿಯಾದ ಪರ್ಯಾಯ ದ್ವೀಪವಾಸಿಗಳ ಸ್ವಪ್ನ ಭೂಮಿಯಾಗಿತ್ತು. ಅಲ್ಲಿನ ನದಿ ತೀರಗಳು, ಹಸಿರಿನಿಂದ ಕಂಗೊಳಿಸುವ ವಿಶಾಲ ತೋಟಗಳು, ಗೋಧಿಯ ಬಯಲುಗಳು ಬಿಲಾಲ್‌ರಲ್ಲಿ ಸುಪ್ತವಾಗಿದ್ದ ಗಾಯಕನನ್ನು ಬಡಿದೆಬ್ಬಿಸಿತು. ವಿವಿಧ ಬಣ್ಣದ ಹೂಗಳು ಅರಳಿ ನಿಂತಿರುವ ಸುಂದರ ಉದ್ಯಾನಗಳು, ಫಲಭರಿತ ವೃಕ್ಷಗಳು ಅವರ ಹೃದಯ ತಂತಿಯನ್ನು ಮೀಟಿದವು. ಹೀಗೆ ಬಿಲಾಲ್(ರ) ಹಾಡಿದರು. ಗುಲಾಮಗಿರಿಯ ತೀವ್ರ ದುಃಖ ಹಾಗೂ ಮನದ ನೋವುಗಳನ್ನು ನುಂಗಿ ಅವರು ಮಧುರವಾಗಿ ಹಾಡಿದರು. ಗುಲಾಮನಿಗೆ ತನ್ನ ನೋವಿನ ಬಗ್ಗೆ ದೂರು ನೀಡುವ ಅವಕಾಶವಿಲ್ಲವಲ್ಲಾ! ಅವನಿಗೆ ನಗು, ಅಳು, ಸ್ವಾತಂತ್ರ್ಯ ಎಲ್ಲವೂ ಮರೀಚಿಕೆಯಾಗಿದೆ. ಅರ್ಧ ರಾತ್ರಿಯ ಕತ್ತಲಲ್ಲಿ ಯಾರೂ ಕಾಣದಂತೆ ಮಾತ್ರ ಅದನ್ನು ಅವನಿಗೆ ಮಾಡಲು ಸಾಧ್ಯ.

ಬಿಲಾಲ್‌ರ ಹಾಡುಗಳು ಅಬೂಬಕರ್‌ರನ್ನು ಅತ್ಯಧಿಕ ಆಕರ್ಷಿಸಿತು. ಅವರ ಕಂಠಸಿರಿಗೆ ಮನಸೋತರು. ಸಾಮಾನ್ಯವಾಗಿ ಅವರೀರ್ವರೂ ಒಂದುಗೂಡುವ ಅವಕಾಶವಿರುವುದಿಲ್ಲ. ಗುಲಾಮನಾದ ನಿಗ್ರೋ ವ್ಯಕ್ತಿ ಹಾಗೂ ಕುರೈಶಿ ಸರದಾರ ಜೊತೆ ಜೊತೆಗೇ ಇರುವುದೆಂದರೇನು? ಆದರೆ ಈ ಬಾರಿ ಉಮಯ್ಯ ತನ್ನ ಹಾಗೂ ಸಂಗಾತಿಗಳ ವ್ಯಾಪಾರ ಸರಕಿನೊಂದಿಗೆ ಇತಿಯೋಪಿಯಾದ ಈ ಗುಲಾಮನನ್ನು ಕಳುಹಿಸಿದ್ದರು. ಹೀಗೆ ಹಲವು ಪ್ರಮುಖ ವರ್ತಕರ ತಂಡದಲ್ಲಿ ಇವರಿಗೂ ಸ್ಥಾನ ದೊರೆಯಿತು.

ಆದರೆ ಈ ಸಿರಿಯಾ ಯಾತ್ರೆಗೆ ಆರಂಭದಲ್ಲೇ ಅಡ್ಡಿ ಉಂಟಾಗಿತ್ತು. ಸರಕುಗಳನ್ನು ಸಿದ್ಧಗೊಳಿಸಿದ ಬಳಿಕ ಬಿಲಾಲ್ ಶಕುನ ನೋಡಲು ಕಅಬಾದ ಬಳಿಗೆ ತಲುಪಿದರು. ಅಲ್ಲಿನ ಮುಖ್ಯ ವಿಗ್ರಹವಾದ ಹುಬಲ್‌ನ ಅನುಮತಿ ಪಡೆಯದೆ ಯಾರೂ ಶುಭ ಕಾರ್ಯಗಳನ್ನು ಆರಂಭಿಸುತ್ತಿರಲಿಲ್ಲ, ವ್ಯಾಪಾರ ಅಥವಾ ಪ್ರಯಾಣ ಹೊರಡುವಾಗ ಲಕ್ಷಣ ನೋಡುವುದು ವಾಡಿಕೆಯಾಗಿತ್ತು. ಬಿಲಾಲ್(ರ) ಕೂಡಾ ಪುರೋಹಿತನಿಗೆ ಕಾಣಿಕೆ ಕೊಟ್ಟು ಶಕುನ ನೋಡಲು ಹೇಳಿದರು. ಬಾಣವನ್ನು ತೆಗೆದು ಸಮಸ್ಯೆಯನ್ನಿಟ್ಟಾಗ ಅಪಶಕುನವಿದೆಯೆಂದು ತಿಳಿದು ಬಂತು. ಇದರಿಂದ ಬಿಲಾಲ್ ನಿರಾಶರಾದರು. ತನ್ನ ಪ್ರಯಾಣ ರದ್ದಾಗುವುದೆಂದು ಆತಂಕಗೊಂಡರು. ಮುಖದಲ್ಲಿ ದುಃಖ ಮಡುಗಟ್ಟಿತು. ಕೂಡಲೇ ಪುರೋಹಿತರು ಒಂದು ಪರಿಹಾರವನ್ನು ಸೂಚಿಸಿದರು. ಇನ್ನೊಂದು ಕಾಣಿಕೆ ನೀಡಿ ಪುನಃ ಪರೀಕ್ಷಿಸುವುದು. ಹೀಗೆ ಎರಡನೆಯ ಬಾರಿ ಕಾಣಿಕೆ ಕೊಟ್ಟು ಶಕುನ ನೋಡಿದಾಗ ಶುಭ ಶಕುನ ಗೋಚರವಾಯಿತು.

ಸಿರಿಯಾದ ಪ್ರಯಾಣ ಅಬೂಬಕರ್(ರ) ಮತ್ತು ಬಿಲಾಲ್‌ರನ್ನು(ರ) ನಿಕಟಗೊಳಿಸಿತು. ಅವರು ಆಪ್ತ ಗೆಳೆಯರಾದರು. ಇದು ಬಿಲಾಲ್‌ರಿಗೆ(ರ) ಒಂದು ಹೊಸ ಅನುಭವವಾಗಿತ್ತು. ಈ ರೀತಿಯ ಗೆಳೆತನ, ಪ್ರೀತಿಯ ಒಡನಾಟ ಇದುವರೆಗೆ ಯಾರಿಂದಲೂ ಲಭಿಸಿರಲಿಲ್ಲ, ಅಲ್ಲದಿದ್ದರೂ ಗುಲಾಮರನ್ನು ಯಾರು ಪ್ರೀತಿಸುತ್ತಾರೆ? ಅದು ಕೂಡಾ ಕರಿಯ ಕುರೂಪಿ ಗುಲಾಮನನ್ನು! ಸುಂದರವಾಗಿ ಹಾಡುವ ಕಲೆ ಇರುವುದರಿಂದ ಓಡಿಸಲಿಲ್ಲವೆಂದು ಮಾತ್ರ! ಆದರೆ ಅಬೂಬಕರ್‌ರ(ರ) ಒಡನಾಟ ಬೇರೆಯೇ ರೀತಿಯಾಗಿತ್ತು. ಪ್ರೀತಿಯ ವರ್ತನೆ, ಆಕರ್ಷಕ ಮಾತುಕತೆಗಳು ಇಬ್ಬರೂ ಆತ್ಮೀಯ ಸಂಗಾತಿಗಳಾದರು. ಈ ಸಂಬಂಧ ಭವಿಷ್ಯದಲ್ಲಿ ದೂರ ವ್ಯಾಪಕ ಫಲ ನೀಡಲು ಕಾರಣವಾಯಿತು. ಶ್ರೀಮಂತನೂ ಸುಂದರ ಮಾತ್ರವಲ್ಲ, ಉನ್ನತ ಸ್ಥಾನದಲ್ಲಿದ್ದ ಅಬೂಬಕರ್(ರ) ಕುರೂಪಿ ಗುಲಾಮನಾದ ಬಿಲಾಲ್‌ರೊಡನೆ(ರ) ಸ್ಥಾಪಿಸಿದ ಸೌಹಾರ್ದತೆಯು ಮಾನವ ಇತಿಹಾಸದ ಅತ್ಯಾಕರ್ಷಕವಾದ ಅಪೂರ್ವ ಅಧ್ಯಾಯಗಳಲ್ಲೊಂದು.

# ಅಬೂಬಕರ್‌ರ(ರ) ಕನಸು

ತಾವೆಲ್ಲಿಗೆ ಹೊರಟಿರುವಿರಿ? ಬಿಲಾಲ್(ರ) ಪ್ರಶ್ನಿಸಿದರು. ಯಾತ್ರಾ ತಂಡವು ವಿಶ್ರಾಂತಿ ಪಡೆಯುತ್ತಿತ್ತು. ಕೇವಲ ಅಬೂಬಕರ್‌ರವರು(ರ) ಮಾತ್ರ ಎದ್ದು ನಡೆಯುತ್ತಿದ್ದರು.

'ಇಲ್ಲಿಯೇ ಒಬ್ಬ ಪುರೋಹಿತನಿದ್ದಾನೆ. ಆತನ ಭೇಟಿಗೆ ಹೊರಟಿದ್ದೇನೆ.'

'ಯಾಕೆ?'

'ನನಗೆ ನಿನ್ನೆ ರಾತ್ರಿಯ ಕನಸಿನ ವ್ಯಾಖ್ಯಾನವನ್ನು ತಿಳಿಯಬೇಕಾಗಿದೆ. ನೀನು ಬರುವೆಯಾ?'

ಅಬೂಬಕರ್ ಪ್ರಶ್ನಿಸಿದರು.

'ತಮ್ಮ ಅನುಮತಿಯಿದ್ದರೆ ನಾನು ಬರುತ್ತೇನೆ' ಬಿಲಾಲ್(ರ) ಹೇಳಿದರು.

ಹೀಗೆ ಅವರಿಬ್ಬರೂ ಪುರೋಹಿತನ ಮಠದೊಳಗೆ ಹೋದರು. ಅನುಮತಿ ಪಡೆದು ಪುರೋಹಿತನನ್ನು ಭೇಟಿಯಾದರು. ತನ್ನ ಕನಸನ್ನು ವಿವರಿಸಿದರು. ಎಲ್ಲವನ್ನೂ ಸಂಪೂರ್ಣವಾಗಿ ಆಲಿಸಿದ ಪುರೋಹಿತ ಕೇಳಿದರು;

'ನೀವು ಎಲ್ಲಿಯವರು?'

'ಮಕ್ಕಾದವರು'

'ನಿಮ್ಮ ಗೋತ್ರ ಯಾವುದು?'

'ಖುರೈಶ್'

'ಉದ್ಯೋಗ?'

'ವ್ಯಾಪಾರ'

ನಿಮ್ಮ ಕನಸು ಸತ್ಯವೆಂದಾದರೆ ನಿಮ್ಮ ಮಧ್ಯೆ ಓರ್ವ ಪ್ರವಾದಿ ನಿಯುಕ್ತರಾಗುತ್ತಾರೆ. ಅವರ ಜೀವನ ಕಾಲದಲ್ಲಿ ನೀವು ಸಹಾಯಕರಾಗುವಿರಿ. ಅಲ್ಲದೆ ಅವರ ಮರಣಾನಂತರ ಅವರ ಪ್ರತಿನಿಧಿಯೂ ಆಗುವಿರಿ.

ಪ್ರವಾದಿಗಳೆಂದರೆ ಏನು? ಬಿಲಾಲ್(ರ) ಮಧ್ಯೆ ಪ್ರವೇಶಿಸಿ ಪ್ರಶ್ನಿಸಿದರು–

'ದೇವ ಸಂದೇಶವಾಹಕರು'

'ಸಂದೇಶವಾಹಕರೋ?' ಅವರು ಆಶ್ಚರ್ಯ ಪ್ರಕಟಿಸಿದರು.

'ಹೌದು. ಜನರನ್ನು ಸನ್ಮಾರ್ಗದೆಡೆಗೆ ಆಹ್ವಾನಿಸಲು ದೇವನು ನಿಯೋಗಿಸುವ ಸಂದೇಶವಾಹಕ- ಪುರೋಹಿತ ವಿವರಿಸಿದರು.

ಹುಬುಲ್, ಲಾತ, ಉಝ್ಝಾ- ಇವರ ಪೈಕಿ ಯಾರು ಆತನನ್ನು ನಿಯೋಗಿಸುವುದು?

ಬಿಲಾಲ್‌ರಿಗೆ(ರ) ಅದಲ್ಲದೆ ಬೇರಾವ ದೇವನ ಪರಿಚಯವೂ ಇರಲಿಲ್ಲ. ಕಣ್ಣು ತೆರೆದ ಮೇಲೆ ಇದನ್ನೇ ಕಂಡದ್ದಲ್ಲದೆ ಪೂಜಿಸುತ್ತಲೂ ಇದ್ದರು.

'ಹೇ! ಅದು ಯಾವುದೂ ಅಲ್ಲ, ಅವೆಲ್ಲಾ ದೇವರುಗಳಲ್ಲ. ಆಕಾಶ ಭೂಮಿಯನ್ನು ಸೃಷ್ಟಿಸಿದ, ಸರ್ವಲೋಕ ಸಂರಕ್ಷಕನಾದ ದೇವನೇ ಪ್ರವಾದಿಗಳನ್ನು ನೇಮಿಸುತ್ತಾನೆ. ಸಿರಿಯಾದ ಕ್ರೈಸ್ತ ಪುರೋಹಿತ ಸ್ಪಷ್ಟಪಡಿಸಿದರು.'

'ಆತನ ಕರ್ತವ್ಯವೇನು?'

'ಏಕನಾದ ದೇವನೆಡೆಗೆ ಆಹ್ವಾನಿಸುವುದು. ಕುಟುಂಬ ಸಂಬಂಧ ಸರಿಪಡಿಸಲು ಆಜ್ಞಾಪಿಸುವುದು. ವಿಗ್ರಹಗಳನ್ನು ನಿರ್ಮೂಲನಗೊಳಿಸುವುದು.'

'ದೇವರುಗಳನ್ನು ನಿರ್ಮೂಲನಗೊಳಿಸುವುದೇ?' ಬಿಲಾಲ್(ರ) ಆಶ್ಚರ್ಯ ವ್ಯಕ್ತಪಡಿಸಿದರು.

'ಹೌದು, ಅವುಗಳನ್ನೆಲ್ಲಾ ಕೆಡವಿ ಹಾಕಲಾಗುತ್ತದೆ.' ಪುರೋಹಿತರ ಮಾತುಗಳು ಬಿಲಾಲ್‌ರನ್ನು ಚಿಂತೆಗೆ ದೂಡಿತು. ಅರಬರ ನಡುವೆ ಓರ್ವ ಪ್ರವಾದಿ ಬಂದು ಅವರದೇ ದೇವಂದಿರನ್ನು ನಾಶಗೊಳಿಸುವುದೇ?

ಸಿರಿಯಾದಿಂದ ಮರಳಿ ಬಂದ ಬಿಲಾಲ್(ರ) ಯಾತ್ರಾ ತಂಡದೊಂದಿಗೆ ಕಅಬಾ ಭವನಕ್ಕೆ ಹೋದರು. ಪರಿಶುದ್ಧ ಭವನಕ್ಕೆ ಪ್ರದಕ್ಷಿಣೆ ಮಾಡದೆ ಯಾರೂ ತಮ್ಮ ಮನೆಗಳಿಗೆ ಪ್ರವೇಶಿಸುತ್ತಿರಲಿಲ್ಲ, ವಾಡಿಕೆಯಂತೆ ಎಲ್ಲರೂ ವಿಗ್ರಹಗಳ ಮುಂದೆ ಕಾಣಿಕೆ ಅರ್ಪಿಸಿ ಪ್ರಣಾಮ ಮಾಡಿದರು. ಲಾತ, ಉಝ್ಝಾ ಮನಾತ, ಹುಬಲ್, ಇಸಾಫ್, ನಾಇಲ.... ಮುನ್ನೂರ ಅರವತ್ತಕ್ಕಿಂತಲೂ ಅಧಿಕ ದೇವರುಗಳು! ಅವು ಅರೇಬಿಯಾದ ಜನಜೀವನದ ಅವಿಭಾಜ್ಯ ಅಂಗವಾಗಿತ್ತು. ತಮ್ಮ ಎಲ್ಲಾ ಕಾರ್ಯಗಳಿಗೂ ಇವುಗಳು ಕಾವಲುಗಾರರೆಂದು ಅವರು ಭಾವಿಸಿದ್ದರು. ಅವುಗಳೊಂದಿಗೆ ಅಗೌರವ ತೋರುವುದನ್ನು ಊಹಿಸಲು ಕೂಡಾ ಸಾಧ್ಯವಿರಲಿಲ್ಲ. ಆದರೆ ಅವೆಲ್ಲವನ್ನೂ ನಾಶಗೊಳಿಸಲಾಗುತ್ತದೆಂದು ಪುರೋಹಿತನು ಹೇಳುತ್ತಾನೆ. ಅಬೂಬಕರ್‌ರ(ರ) ಕನಸು ನಿಜವಾದರೆ ಸಂದೇಶವಾಹಕರು ಅವೆಲ್ಲವನ್ನೂ ನಾಶಗೊಳಿಸುವರು. ಬಿಲಾಲ್‌ರ(ರ) ತಲೆಯಲ್ಲಿ ಪುರೋಹಿತನ ಮಾತೇ ಪ್ರತಿಧ್ವನಿಸುತ್ತಿತ್ತು.

ಈ ಬಾರಿ ಬಿಲಾಲ್‌ರ(ರ) ಆರಾಧನೆಯಲ್ಲಿ ಹಿಂದಿನಂತೆ ತನ್ಮಯತೆಯಿರಲಿಲ್ಲ. ಎಷ್ಟು ಪ್ರಯತ್ನಿಸಿದರೂ ವಿಗ್ರಹಗಳ ಬಗ್ಗೆ ಭಯಭಕ್ತಿ ಮೂಡಲಿಲ್ಲ. ಅದು ಸಹಜವೂ ಹೌದು. ಅವರ ಅಂತರಂಗ ಸಂಘರ್ಷದ ಗೂಡಾಗಿತ್ತು. ಇದುವರೆಗೆ ನಂಬಿದ್ದ ವಿಶ್ವಾಸದ ಬಗ್ಗೆ ಗೊಂದಲ ಉಂಟಾಗಿತ್ತು.

ಪುರೋಹಿತನ ಮಾತು ನಿಜವಾಗಬಹುದೇ? ಅಲ್ಲದಿದ್ದರೂ ಇವೆಲ್ಲವೂ ಕಲ್ಲು ಮರಗಳಲ್ಲವೇ? ಕೀರ್ತನೆ, ಪ್ರಾರ್ಥನೆಗಳು ಅವುಗಳಿಗೆ ಕೇಳುತ್ತದೆಯೇ? ನಮಗೆ ಉಪಕಾರ ಮಾಡಲು ಅವುಗಳಿಗೆ ಸಾಧ್ಯವಿದೆಯೇ? ನಮ್ಮ ಆರಾಧನೆ, ಅರ್ಚನೆಗಳನ್ನು ಅವು ಕಾಣುತ್ತವೆಯೇ? ನಮಗೆ ಕಾಟ ಕೊಡಲು ಅವುಗಳಿಗೆ ಸಾಧ್ಯವಿರಬಹುದೇ? ಕಅಬಾ ಪ್ರದಕ್ಷಿಣೆ ಮಾಡುತ್ತಲೇ ಬಿಲಾಲ್ ಸ್ವಯಂ ತನ್ನನ್ನು ಪ್ರಶ್ನಿಸಿಕೊಂಡರು.

ಈ ದೇವರುಗಳು ಇವೆಲ್ಲವುಗಳಿಗೆ ಅಶಕ್ತರಾಗಿದ್ದರೆ. ಜನರು ಯಾಕೆ ಅದನ್ನು ಪೂಜಿಸುತ್ತಾರೆ? ಅದರ ಮುಂದೆ ಉರುಳು ಸೇವೆ ನಡೆಸುತ್ತಿದ್ದಾರೆ. ಅವುಗಳಿಗೆ ನೈವೇದ್ಯಗಳನ್ನೂ ಕಾಣಿಕೆಗಳನ್ನೂ ಅರ್ಪಿಸುತ್ತಿದ್ದಾರೆ? ದೇವರುಗಳಿಗೆ ಅಂತಹ ಸಾಮರ್ಥ್ಯವಿಲ್ಲದಿದ್ದರೆ ಹೀಗೆ ಪೂಜಿಸಲು ಜನರೇನು ಮೂರ್ಖರೇ? ಕಷ್ಟ, ಸುಖ, ಬರಗಾಲ, ಸಮೃದ್ಧಿ ಎಲ್ಲವನ್ನೂ ಅವುಗಳೇ ನೀಡುವುದು. ಸಂಪತ್ತು, ಅಧಿಕಾರ, ಬಡತನವನ್ನು ನೀಡುವ ಹಾಗೂ ಕಸಿಯುವ ಸಾಮರ್ಥ್ಯ ಲಾತ, ಉಝ್ಝಾ ಮನಾತ್‌ರಿಗಿದೆಯೆಂದು ಜನರು ಹೇಳುವುದನ್ನು ಹಲವು ಬಾರಿ ಕೇಳಿದ್ದೇನಲ್ಲವೇ? ಬಿಲಾಲ್‌ರ ಮನದಲ್ಲೇಳುತ್ತಿದ್ದ ಪ್ರಶ್ನೆಗಳಿಗೆ ಕೊನೆಯೇ ಇರಲಿಲ್ಲ.

ಸರದಾರರು, ಯಜಮಾನರು, ಉನ್ನತ ವರ್ಗದವರು ತಮ್ಮ ಬೇಡಿಕೆಗಳ ಪೂರೈಕೆಗಾಗಿ ಅಥವಾ ತಮ್ಮ ಹಿತಾಸಕ್ತಿಯ ರಕ್ಷಣೆಗಾಗಿ ಇವುಗಳನ್ನು ಸೃಷ್ಟಿಸಿರಬಹುದೇ? ಧರ್ಮವು ಇವರಿಗೆ ಮರ್ದನಕ್ಕಿರುವ ಪರದೆಯಲ್ಲವೇ? ಈ ದೇವರುಗಳೆಲ್ಲಾ ಶೋಷಣೆಯ ಉಪಾಧಿಗಳಾಗಿವೆ. ಅವುಗಳನ್ನು ಸಾಕ್ಷಿ ನಿಲ್ಲಿಸಿ ಯಜಮಾನರು ನಮ್ಮನ್ನು ಹಿಂಸಿಸುತ್ತಿಲ್ಲವೇ? ಬಡ ಹೆಣ್ಮಕ್ಕಳನ್ನು ಉಪಯೋಗಿಸಿ ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳುತ್ತಿಲ್ಲವೇ? ಇವೆಲ್ಲಾ ದೇವರುಗಳೆಂದಾದರೆ ಅವು ಕೇವಲ ಶ್ರೀಮಂತರ ಹಿತರಕ್ಷಣೆ ಮಾತ್ರ ಮಾಡುತ್ತವೆಯೇ? ಧನಿಕರ ದೌರ್ಜನ್ಯಕ್ಕೆ ಕಾವಲಾಗಿರುವ ಕಳ್ಳ ದೇವರುಗಳು! ತನ್ನಂತೆ ಅಸಹಾಯಕರಾಗಿರುವ ಗುಲಾಮರನ್ನು ತಿರುಗಿ ನೋಡದ, ಸಾಮಾನ್ಯರೆಡೆಗೆ ಕಣ್ಣೆತ್ತಿಯೂ ನೋಡದ ಠಕ್ಕ ದೇವರುಗಳು. ಲಾತ ಹಾಗೂ ಉಝ್ಝಾದ ಉಪಸ್ಥಿತಿಯಲ್ಲಿ ಎಷ್ಟು ಮಂದಿಯನ್ನು ಕ್ರೂರವಾಗಿ ಕೊಲ್ಲಲಾಗಿದೆ? ಎಲ್ಲವನ್ನೂ ನೋಡಿ ನಿಂತ ಕಣ್ಣಲ್ಲಿ ರಕ್ತವಿಲ್ಲದ ಕುಲದೈವಗಳು. ಕೋಟ್ಯಾಧೀಶರಿಗೆ ಬೆಂಬಲವಾಗಿರುವ ಕಪಟ ದೇವರುಗಳು! ಅಬೂಬಕರ್‌ರ ಸ್ವಪ್ನ ನನಸಾಗಬೇಕು! ಇವೆಲ್ಲವೂ ನಾಶವಾಗಬೇಕು. ಬಿಲಾಲ್‌ರ ಮನ ಮಂತ್ರಿಸಿತು.

ಸಾಧ್ಯವಿಲ್ಲ! ನಾನು ಗುಲಾಮನಾಗಿದ್ದೇನೆ. ಗುಲಾಮ ಹೀಗೆ ಆಲೋಚಿಸಬಾರದು. ಅವನಿಗೆ ಸ್ವಂತ ಧರ್ಮವಿಲ್ಲ, ಯಜಮಾನನದೇ ಧರ್ಮ. ಧರ್ಮವಿರುತ್ತಿದ್ದರೆ ನಾನು ಕ್ರೈಸ್ತನಾಗಿರುತ್ತಿದ್ದೆ. ನಾನು ಮತ್ತು ತಂದೆ ತಾಯಿಗಳು ಕ್ರೈಸ್ತ ಧರ್ಮ ತ್ಯಜಿಸಿದ್ದು ನಮ್ಮ ಸ್ವಂತ ತೀರ್ಮಾನದಿಂದಲ್ಲ, ಗುಲಾಮನಿಗೆ ತೀರ್ಮಾನಿಸುವ ಹಕ್ಕು ಕೂಡಾ ಇಲ್ಲ. ಧರ್ಮ ದೇವರುಗಳನ್ನು ಯಜಮಾನ ನಿರ್ಣಯಿಸುತ್ತಾನೆ. ಆದ್ದರಿಂದ ತಾನು ಈ ರೀತಿ ಯೋಚಿಸುವುದೇ ಅಪರಾಧವಾಗಿದೆ. ಅವರ ಅಂತರಂಗ ಹೇಳಿತು.

ಆದರೂ ನಾನೋರ್ವ ಮನುಷ್ಯನಲ್ಲವೇ? ನನಗೂ ಉಮಯ್ಯನಂತೆ ಕೈಕಾಲುಗಳಿಲ್ಲವೇ? ಕಣ್ಣು ಕಿವಿಗಳಿಲ್ಲವೇ? ಮಾಂಸ ಮಜ್ಜೆಗಳಿಲ್ಲವೇ? ದುಃಖ ಸಂತೋಷವಿಲ್ಲವೇ? ಭಾವನೆ, ವಿಚಾರಗಳಿಲ್ಲವೇ? ಹಾಗಾದರೆ ನನಗೂ ಉಮಯ್ಯನಿಗೂ ಇರುವ ವ್ಯತ್ಯಾಸವೇನು? ಆತ ದುಡಿಯುವುದಿಲ್ಲ, ನಾನಾದರೋ ಹಗಲಿಡೀ ದುಡಿಯುತ್ತೇನೆ. ಆತನ ಆಹಾರ ರುಚಿಕರವಾಗಿದೆ. ಕುದುರೆಗಳು ತಿನ್ನುವ ಹುರುಳಿ ನನ್ನ ಆಹಾರವಾಗಿದೆ. ಆತ ಮೆದುವಾದ ಹಾಸಿಗೆಯಲ್ಲಿ ಮಲಗುತ್ತಾನೆ. ನಾನು ಜೀತದಾಳುಗಳ ಕೊಠಡಿಯಲ್ಲಿ ಒರಟು ನೆಲದ ಮೇಲೆ ಮಲಗುತ್ತೇನೆ! ಬಿಲಾಲ್‌ರು ಕೋಪದಿಂದ ಕುದಿಯುತ್ತಿದ್ದರು. ಅದು ಯಾವ ಸಂದರ್ಭದಲ್ಲೂ ಸ್ಫೋಟವಾಗುವ ಹಂತದಲ್ಲಿತ್ತು.

ಇಲ್ಲ! ಸಾಧ್ಯವಿಲ್ಲ. ತನ್ನನ್ನು ತಡೆದು ನಿಲ್ಲಿಸುವ ಒಂದು ಭಯಾನಕ ವಾಸ್ತವಿಕತೆಯಿದೆ. ಯಜಮಾನರ ಕಾನೂನು! ಅದರಿಂದ ತಪ್ಪಿಸಿ ಓಡಿ ಹೋಗಲು ಸಾಧ್ಯವಿಲ್ಲ. ನನ್ನನ್ನು ಅವರು ಖರೀದಿಸಿದ್ದಾರೆ. ನನ್ನ ಚಿಂತನೆಗಳಿಗೂ ಭಾವನೆಗಳಿಗೂ ಅವರು ಬೆಲೆ ಕೊಟ್ಟಿದ್ದಾರೆ. ನನ್ನನ್ನು ಪಡೆಯಲು ಹಣ ನೀಡದಿದ್ದರೂ ನನ್ನ ತಂದೆ ತಾಯಿಗಳನ್ನು ಖರೀದಿಸಲು ನೀಡಲಾಗಿದೆ. ಉಮಯ್ಯ ನೀಡಿದ್ದಲ್ಲ, ಆತನ ತಂದೆ. ಆದ್ದರಿಂದ ಈಗ ನಾನು ಗುಲಾಮ! ಈ ವಾಸ್ತವಿಕತೆ ಮರೆಯಲಸಾಧ್ಯ. ಬಿಲಾಲ್‌ರ ಭಾವೋದ್ವೇಗ ಹಠಾತ್ತನೆ ಇಳಿಯಿತು. ಅವರು ಚಿಂತಾಕ್ರಾಂತರಾದರು.

ಕಅಬಾ ಪ್ರದಕ್ಷಿಣೆ ಮತ್ತು ಪೂಜೆ ಮುಗಿಸಿ ಬಿಲಾಲ್ ಬನೂಜುಮಹ್ ಎಂಬಲ್ಲಿಗೆ ಮರಳಿದರು. ಉಮಯ್ಯ ಮತ್ತು ಸಂಗಡಿಗರು ಲಾಭವನ್ನು ಹಂಚಿಕೊಂಡರು. ಸರಕುಗಳನ್ನು ಪಾಲು ಮಾಡಿದರು. ವ್ಯಾಪಾರದ ಲೆಕ್ಕ ಹಾಗೂ ವಿವರಗಳನ್ನು ಪರಿಶೀಲಿಸಿದ ಬಳಿಕ ಎಲ್ಲರೂ ಬಿಲಾಲ್‌ನೆಡೆಗೆ ತಿರುಗಿದರು. 'ನಿನ್ನ ಹಾಡು ಕೇಳದೆ ಎಷ್ಟು ದಿನವಾಯಿತು. ಆದ್ದರಿಂದ ಹಾಡು' ಎಂದು ಅವರು ಸೂಚಿಸಿದರು.

'ನನಗೆ ಆರೋಗ್ಯ ಸರಿಯಿಲ್ಲ, ದಣಿವು, ಚಿಂತೆಯಿಂದ ಬಳಲುತ್ತಿದ್ದೇನೆ' ಎಂದು ಬಿಲಾಲ್‌ಗೆ ಹೇಳಬೇಕೆನಿಸಿತು. ಆದರೆ ಗುಲಾಮನಾದ್ದರಿಂದ ಹಾಗೆ ಹೇಳಲು ಸಾಧ್ಯವಿಲ್ಲ. ಕೇವಲ ಉಮಯ್ಯ ಒಬ್ಬನೇ ನನ್ನ ಯಜಮಾನನಲ್ಲ, ಕುರೈಶಿ ಪ್ರಮುಖರೆಲ್ಲರ ಆಜ್ಞೆಯನ್ನು

ಪಾಲಿಸಬೇಕಾದಂತಹ ದುರ್ಗತಿ. ಗುಲಾಮರು ಆಜ್ಞೆ ಪಾಲಿಸದಿದ್ದರೆ ಅದು ಮಹಾ ಅಪರಾಧವಾಗಿದೆ. ಅದಕ್ಕೆ ಪ್ರತಿಫಲವಾಗಿ ಲಾಠಿಯೇಟಿನ ರುಚಿ ಅನುಭವಿಸಬೇಕು. ಪಾರಾಗಲು ಸಾಧ್ಯವಿಲ್ಲದಂತಹ ಬಂಧನವಾಗಿತ್ತದು. ಲಾಠಿ ಅವನ ನಿತ್ಯದ ಸಂಗಾತಿ. ಗುಲಾಮನ ಜೀವನದಲ್ಲಿ 'ಅಸಾಧ್ಯ' ಎಂಬ ಪದವೇ ಇಲ್ಲ, ಪ್ರತಿಭಟಿಸಿದರೆ ಆಹಾರ ನೀಡದಿರುವ ಹಾಗೂ ಕಾದು ಕೆಂಪಾದ ಕಬ್ಬಿಣದ ಸರಳುಗಳ ಶಿಕ್ಷೆ ಕಾದಿದೆ. ಆದ್ದರಿಂದ ಬಿಲಾಲ್ ಅನುಸರಿಸಿದರು. ಅಂತರಾಳದಲ್ಲಿ ಜ್ವಲಿಸುತ್ತಿದ್ದ ಎಲ್ಲಾ ನೋವು, ದುಃಖ ಹಾಗೂ ಕೋಪವನ್ನು ಅದುಮಿ ಹಿಡಿದು ಅವರು ಹಾಡಿದರು. ಆ ಸುಶ್ರಾವ್ಯ ನಾದಕ್ಕೆ ಖರ್ಜೂರದ ಮರಗಳು ಮಾತ್ರ ಕೈಯಲ್ಲಾಡಿಸಿ ಅಭಿನಂದನೆ ಸಲ್ಲಿಸಿದುವು.

# ಮಧ್ಯರಾತ್ರಿ ಉದಯಿಸಿದ ಸೂರ್ಯ

'ಬಿಲಾಲ್! ಬಿಲಾಲ್!' ನನ್ನನ್ನು ಯಾರೋ ಕರೆಯುತ್ತಿದ್ದಾರೆಯೇ? ಈ ಮಧ್ಯರಾತ್ರಿ ಕರೆಯುವವರು ಯಾರು? ಈ ಗುಲಾಮರ ಪಾಳಯಕ್ಕೆ ಬರುವವರಾರು? ಇದು ತನ್ನ ಭ್ರಮೆಯಾಗಿರಬಹುದೆಂದು ಭಾವಿಸಿ ಬಿಲಾಲ್(ರ) ಸರಿದು ಮಲಗಿದರು.

'ಬಿಲಾಲ್! ಬಿಲಾಲ್!' ತುಂಬಾ ತಗ್ಗಿದ ಸ್ವರ. ಹೌದು, ಯಾರೋ ಕರೆಯುತ್ತಿದ್ದಾರೆ. ಆದರೆ ಯಾರೂ ಕಾಣುತ್ತಿಲ್ಲ, ಪುನಃ ಅಲ್ಲೇ ಮಲಗಲು ತೀರ್ಮಾನಿಸಿದರು. ಆಗ ಪುನಃ 'ಬಿಲಾಲ್! ಬಿಲಾಲ್!'

ಇನ್ನು ಮಲಗಿದರೆ ಆಗದೆಂದು ಹೊರಗೆ ಬಂದು ಶಬ್ದ ಕೇಳಿ ಬಂದ ದಿಕ್ಕಿಗೆ ನಡೆದರು. ಹುಣ್ಣಿಮೆಯ ಬೆಳದಿಂಗಳಲ್ಲಿ ಬಿಲಾಲ್‌ರಿಗೆ(ರ) ಆಗಂತುಕನ ಪರಿಚಯ ಸಿಕ್ಕಿತು. ತನ್ನ ಆಪ್ತಮಿತ್ರ ಅಬೂಬಕರ್(ರ). ಸಿರಿಯಾದ ಪ್ರಯಾಣದಿಂದ ಲಭಿಸಿದ ಪ್ರೀತಿಯ ಖನಿ. ಆದರೆ ಈ ಮಧ್ಯರಾತ್ರಿ ಏಕೆ ಬಂದಿರಬಹುದು? ಬಿಲಾಲ್‌ರಿಗೆ(ರ) ಒಂದೂ ಅರ್ಥವಾಗಲಿಲ್ಲ, ಆದ್ದರಿಂದ ಆಶ್ಚರ್ಯದಿಂದ ಬಂದ ಕಾರಣ ವಿಚಾರಿಸಿದರು.

'ಒಂದು ಮುಖ್ಯ ವಿಷಯವಿದೆ' ಅಬೂಬಕರ್(ರ) ಉಸುರಿದರು. ಯಾರಿಗೂ ತಿಳಿಯದಂತೆ ಮೆಲ್ಲ ಮೆಲ್ಲನೆ ತೆವಳಿ, ಬಗ್ಗಿ ಹೇಗೂ ಅಲ್ಲಿಗೆ ತಲುಪಿದರು.

'ಬೆಳಿಗ್ಗೆ ಹೇಳಿದರೆ ಸಾಕಾಗುತ್ತಿರಲಿಲ್ಲವೇ? ಏಕೆ ಇಷ್ಟು ಕಷ್ಟಪಟ್ಟು ಈ ರಾತ್ರಿ ಬಂದಿರಿ? ಬಿಲಾಲ್(ರ) ಪ್ರಶ್ನಿಸಿದರು.

'ಅದು ಸಾಧ್ಯವಿಲ್ಲ, ನಮ್ಮಿಬ್ಬರ ಭೇಟಿ ನಿನ್ನ ಯಜಮಾನನಿಗೆ ತಿಳಿಯಬಾರದು.'

'ಏನು ಅಂತಹ ವಿಶೇಷ?'

'ದೇವ ಸಂದೇಶವಾಹಕರು ಪ್ರತ್ಯಕ್ಷರಾಗಿದ್ದಾರೆ' ಅಬೂಬಕರ್(ರ) ಹೇಳಿದರು.

'ಏನು? ದೇವ ಸಂದೇಶವಾಹಕರೇ?' ಬಿಲಾಲ್ ಆಶ್ಚರ್ಯದಿಂದ ಕೇಳಿದರು.

'ಹೌದು! ಅಲ್ಲಾಹನ ಪ್ರವಾದಿ ಆಗತರಾಗಿದ್ದಾರೆ.'

'ಯಾರದು?'

'ಅಬ್ದುಲ್ಲರ ಮಗ ಮುಹಮ್ಮದ್.'

'ಅಲ್ ಅಮೀನ್ ಎಂದು ಕರೆಯಲ್ಪಡುವವರೇ?'

'ಹೌದು! ಜೀವನದಲ್ಲಿ ಒಂದು ಸುಳ್ಳು ಮಾತೂ ಹೇಳದ ಆ ಪುಣ್ಯಾತ್ಮ.'

'ಅವರು ಪ್ರವಾದಿಗಳು ಎಂದು ನಿಮಗೆ ಖಾತರಿಯಿದೆಯೇ?' ಬಿಲಾಲ್‌ರ(ರ) ಪ್ರಶ್ನೆ.

'ಹೌದು. ಅದರಲ್ಲಿ ಸಂಶಯವೇ ಇಲ್ಲ, ನಾನು ಅವರೊಂದಿಗೆ ಮಾತುಕತೆ ನಡೆಸಿ, ಅದು ಸತ್ಯವೆಂದು ಮನವರಿಕೆಯಾದ ಬಳಿಕವೇ ವಿಶ್ವಾಸವಿರಿಸಿದೆ.'

'ಮುಹಮ್ಮದರಿಗೆ ಇದರಿಂದ ಶ್ರೀಮಂತರಾಗಬೇಕೆಂಬ ಬಯಕೆಯಿದೆಯೇ? ಅಧಿಕಾರ ಮೋಹವೇನಾದರೂ ಅಡಗಿದೆಯೇ?' ವಿಷಯವನ್ನು ದೃಢಪಡಿಸಿಕೊಳ್ಳಲು ಹಾಗೂ ಸಂಶಯ ನಿವಾರಿಸಿಕೊಳ್ಳಲು ಬಿಲಾಲ್(ರ) ಪ್ರಶ್ನಿಸಿದರು.

ಬಿಲಾಲ್‌ರಿಗೆ(ರ) ಅಬ್ದುಲ್ಲಾರ ಮಗ ಮುಹಮ್ಮದ್‌ರ(ಸ) ಪರಿಚಯ ಚೆನ್ನಾಗಿತ್ತು. ಗರ್ಭಸ್ಥ ಶಿಶುವಾಗಿರುವಾಗಲೇ ತಂದೆಯ ಮರಣ ಮತ್ತು ಆರು ವರ್ಷವಾಗುತ್ತಲೇ ತಾಯಿಯನ್ನು ಕಳೆದುಕೊಂಡ ಸುಂದರನಾದ ಅನಾಥ ಬಾಲಕ. ಖುರೈಶಿ ವಂಶದವನಾದರೂ ಅಹಂಕಾರದ ಛಾಯೆಯಿಲ್ಲದವನು. ಸತ್ಯಸಂಧ ಹಾಗೂ ಪ್ರಾಮಾಣಿಕ ಎಂದು ಸಮಾಜದಲ್ಲಿ ಗುರುತಿಸಲ್ಪಡುವ ವ್ಯಕ್ತಿ. ಎಲ್ಲಾ ವಿಧದಿಂದಲೂ ಈ ಸ್ಥಾನಕ್ಕೆ ಸೂಕ್ತ ವ್ಯಕ್ತಿ. ಬಿಲಾಲ್‌ರ(ರ) ಮನಸ್ಸು ಹೇಳಿತು. ಆದ್ದರಿಂದ ಹೆಚ್ಚಿನ ವಿಷಯ ತಿಳಿದುಕೊಳ್ಳುವ ಉತ್ಸಾಹದಿಂದ ಕೇಳಿದರು.

'ಅವರು ಏನು ಅಪೇಕ್ಷಿಸುತ್ತಿದ್ದಾರೆ?'

'ಎಲ್ಲಾ ರೀತಿಯ ಗುಲಾಮತನದಿಂದ ವಿಮೋಚನೆ ದೊರೆಯಬೇಕು, ನಿರ್ಜೀವವಾದ ಕಲ್ಲುಗಳನ್ನು ಪೂಜಿಸುವುದನ್ನು ನಿಲ್ಲಿಸಬೇಕು. ನಿರ್ಮಲವಾದ ಆಕಾಶ, ವಿಶಾಲವಾದ ಮರುಭೂಮಿ, ಹೊಳೆಯುತ್ತಿರುವ ನಕ್ಷತ್ರಗಳು, ಪ್ರಜ್ವಲಿಸುತ್ತಿರುವ ಸೂರ್ಯ ಅಲ್ಲದೆ ಜುಳು ಜುಳು ಹರಿಯುವ ಝರಿಗಳನ್ನು ಸೃಷ್ಟಿಸಿದವನೂ ಪ್ರಭುವೂ ನಿಯಂತ್ರಕನೂ ಆದ ಏಕೈಕ ದೇವನನ್ನು ಮಾತ್ರ ಆರಾಧಿಸಬೇಕು ಎಂದು ಅವರು ಹೇಳುತ್ತಿದ್ದಾರೆ. ಪ್ರವಾದಿಯ ಬೋಧನೆಗಳಲ್ಲಿ ಯಜಮಾನ ಗುಲಾಮನಿಗಿಂತ ಶ್ರೇಷ್ಠನಲ್ಲ, ಅವರು ಪರಿಚಯಿಸುವ ದೇವನ ಸನ್ನಿಧಿಯಲ್ಲಿ ಎಲ್ಲರೂ ಸಮಾನರು. ದೇವನ ಭಯಭಕ್ತಿ, ವಿಶ್ವಾಸ ಹಾಗೂ ಸತ್ಕರ್ಮಗಳೇ ನಿಜವಾದ ಯಶಸ್ಸಿನ ಮಾನದಂಡ. ಕುಟುಂಬ, ಕುಲ, ವರ್ಣ ಹಾಗೂ ವರ್ಗಕ್ಕೆ ಯಾವುದೇ ಮೇಲ್ಮೆಯಿಲ್ಲ, ದೇವನ ಮತ್ತು ದಾಸರ ನಡುವೆ ಮಧ್ಯವರ್ತಿಗಳ ಅಗತ್ಯವಿಲ್ಲ, ಅವರ ಸಹಾಯವಿಲ್ಲದೆಯೇ ಪ್ರಭುವಿಗೆ ನಿಕಟರಾಗಲು ಸಾಧ್ಯ. ಜನರು ಪರಸ್ಪರ ಪ್ರೀತಿ ಹಾಗೂ ಕರುಣೆಯ ವಾಹಕರಾಗಬೇಕು. ಒಳಿತನ್ನು ಪಾಲಿಸಬೇಕು ಮತ್ತು ಕೆಡುಕಿನಿಂದ ದೂರವಿರಬೇಕೆಂದು ಅವರು ಹೇಳುತ್ತಾರೆ. ಸಂತಾನ ಹತ್ಯೆ, ಕುಟುಂಬ

ಸಂಬಂಧ ಮುರಿಯುವುದನ್ನು ನಿಷೇಧಿಸಿದ್ದಾರೆ. ಅಲ್ಲದೆ ಅವರ ಬೋಧನೆಗಳು ಐಹಿಕ ಲಾಭ ಹಾಗೂ ಅನಶ್ವರ ಸೌಭಾಗ್ಯದ ಬಗ್ಗೆ ಖಾತರಿ ನೀಡುತ್ತದೆ. ಅಬೂಬಕರ್(ರ) ಸಂಪೂರ್ಣವಾಗಿ ವಿವರಿಸಿದರು.

ಬಿಲಾಲ್(ರ) ಎಲ್ಲವನ್ನೂ ತದೇಕ ಚಿತ್ತದಿಂದ ಆಲಿಸುತ್ತಿದ್ದರು. ಆದರೆ ಯಾವುದೇ ಅಭಿಪ್ರಾಯ ವ್ಯಕ್ತಪಡಿಸಲಿಲ್ಲ, ಆದ್ದರಿಂದ ಅಬೂಬಕರ್(ರ) ಅಭಿಪ್ರಾಯ ಕೇಳಿದರು. 'ಏನು ಹೇಳಬೇಕೆಂದು ನನಗೆ ಹೊಳೆಯುತ್ತಿಲ್ಲ' ಬಿಲಾಲ್(ರ) ನುಡಿದರು.

'ಖಂಡಿತವಾಗಿಯೂ ಈ ಹೊಸಧರ್ಮ ನಿನ್ನನ್ನು ಹರ್ಷ ಪುಳಕಿತಗೊಳಿಸುತ್ತದೆ. ನನಗೆ ದೊರೆತುದಕ್ಕಿಂತ ಹೆಚ್ಚಿನ ಆನಂದ ನಿನಗೆ ಲಭಿಸುತ್ತದೆ. ಇದರಿಂದ ನೀನು ಮತ್ತು ಯಜಮಾನ ಸಮಾನರಾಗುತ್ತೀರಿ. ನೀನೂ ಅವರೂ ದೇವನ ಮುಂದೆ ಸಮಾನರು. ಹೀಗಿದ್ದರೂ ಏನು ಹೇಳಬೇಕೆಂಬ ಗೊಂದಲವಿದೆಯೇ? ಸಾಮಾನ್ಯ ಬುದ್ಧಿಯಿರುವ ಯಾರಿಗೂ ಅಂಗೀಕರಿಸಲು ಸಾಧ್ಯವಿಲ್ಲದ ಕುರೈಶರ ಧರ್ಮವೆಲ್ಲಿ? ಈ ಧರ್ಮವೆಲ್ಲಿ? ಅವರು ಅರ್ಚನೆ ಮಾಡುವ ನಿರ್ಜೀವವಾದ ದೇವಂದಿರೆಲ್ಲಿ? ಮುಹಮ್ಮದ್ ಪರಿಚಯಿಸುವ ಸರ್ವಶಕ್ತನಾದ ಅಲ್ಲಾಹನೆಲ್ಲಿ? ಜೀವನ, ಮರಣ ನೀಡುವ, ನಿರಪೇಕ್ಷಕನೂ ಸರ್ವಾಂತರ್ಯಾಮಿಯೂ ಆದ ಏಕದೇವನೆಡೆಗೆ ಅವರು ಜನರನ್ನು ಆಹ್ವಾನಿಸುತ್ತಿದ್ದಾರೆ.'

ಹಾಗಾದರೆ ಪ್ರವಾದಿಗಳು ನನ್ನಂತಹವರ ವಿಮೋಚನೆಗಾಗಿ ಆಗಮಿಸಿದ್ದಾರೆ. ಅವರು ಗುಲಾಮ ಮತ್ತು ಯಜಮಾನರ ನಡುವಿನ ಅಂತರವನ್ನು ಕೊನೆಗೊಳಿಸುತ್ತಾರೆ. ಅಜ್ಞಾನ, ಅಂಧಕಾರ, ಗುಲಾಮತನ, ಮೂಢನಂಬಿಕೆಗಳಿಂದ ಜನರನ್ನು ಬಡಿದೆಬ್ಬಿಸುವ ಕರೆ ನೀಡುವ ಮಹಾನ್ ಪ್ರವಾದಿಯಾಗಿದ್ದಾರೆ. ಬಿಲಾಲ್(ರ) ಆಲೋಚನಾ ಮಗ್ನರಾದರು.

'ಏನು? ನಿನ್ನಿಂದ ಏನೂ ಪ್ರತಿಕ್ರಿಯೆ ಬರುತ್ತಿಲ್ಲಾ?' ಅಬೂಬಕರ್(ರ) ಬಿಲಾಲ್‌ರ(ರ) ಉತ್ತರಕ್ಕೆ ತವಕಿಸಿದರು. 'ಅಬೂಬಕರ್! ಮುಹಮ್ಮದ್‌ರ ಧರ್ಮ ಮತ್ತು ಕುರೈಶರ ಧರ್ಮವು ಒಂದೇ ರೀತಿಯದ್ದಲ್ಲ, ಸಿರಿಯಾದಿಂದ ಮರಳಿದಾಗಲೇ ಈ ದೇವರುಗಳ ಬಗ್ಗೆ ಮನದಲ್ಲಿ ಸಂಶಯಗಳು ಮೂಡಿದ್ದವು. ಆದರೂ ತಟ್ಟನೆ ಇನ್ನೊಂದು ಹೊಸ ಮತವನ್ನು ಸ್ವೀಕರಿಸುವುದು ಕಷ್ಟವೆಂದು ನಿಮಗೆ ತಿಳಿಯದೆ? ಅದೆಷ್ಟೇ ಉನ್ನತ ಹಾಗೂ ಶ್ರೇಷ್ಠವಾದರೂ ಬದಲಾಯಿಸುವುದು ಕಷ್ಟವೆನಿಸುತ್ತದೆ?

'ಕುರೈಶ್ ಪ್ರಮುಖನೊಬ್ಬ ಈ ಮಾತನ್ನು ಹೇಳುವುದಾದರೆ ನಾನು ಒಪ್ಪಿಕೊಳ್ಳುತ್ತಿದ್ದೆ. ಪೂರ್ವಿಕರ ಆಚರಣೆಯನ್ನು ಧಿಕ್ಕರಿಸಲು, ಅದನ್ನು ತ್ಯಜಿಸಲು ಅವನಿಗೆ ಸ್ವಲ್ಪವಾದರೂ ತೊಂದರೆಯಾಗುತ್ತಿತ್ತು. ಆದರೆ ನಿನ್ನಂಥವರಿಗೆ ಇದರಿಂದ ಯಾವುದೇ ನಷ್ಟವೂ ಇಲ್ಲ, ಆದರೂ ನೀನು ಈ ರೀತಿ ಹೇಳುತ್ತಿರುವುದು ನನಗೆ ಆಶ್ಚರ್ಯವನ್ನುಂಟು ಮಾಡುತ್ತಿದೆ. ಎಂದು ಅಬೂಬಕರ್(ರ) ಆಶ್ಚರ್ಯ ವ್ಯಕ್ತಪಡಿಸಿದರು.

ಹೌದು, ಕೈಕೋಳಗಳು ಹಾಗೂ ಕಾಲ ಸರಪಳಿಗಳಲ್ಲದೆ ನಾನು ಕಳೆದುಕೊಳ್ಳುವಂತಹುದು ಏನೂ ಇಲ್ಲ, ತನ್ನ ವಂಶದ ಅಥವಾ ಸಂಸ್ಕೃತಿಯ ಬಗ್ಗೆ ನನಗೆ ಹೆಮ್ಮೆ ಇಲ್ಲ, ಅವುಗಳಿಂದ ದೂರವಾದರೆ ದುಃಖವಂತೂ ಇಲ್ಲವೇ ಇಲ್ಲ, ಬಿಲಾಲ್(ರ) ಯೋಚಿಸಿದರು, ಒಬ್ಬ ಸಣ್ಣ ಹುಡುಗನಂತೆ ಅವರು ಕೇಳಿದರು;

'ನಾನೇನು ಮಾಡಬೇಕು?'

"ಅಲ್ಲಾಹನಲ್ಲದೆ ಬೇರೆ ಆರಾಧ್ಯರಿಲ್ಲ, ಮುಹಮ್ಮದ್‌ರು(ಸ) ಅಲ್ಲಾಹನ ಸಂದೇಶವಾಹಕರಾಗಿದ್ದಾರೆ ಎಂದು ನಾನು ಸಾಕ್ಷ್ಯ ವಹಿಸುತ್ತೇನೆ" ಎಂದು ಘೋಷಿಸಿರಿ. ಅಬೂಬಕರ್‌ರ(ರ) ಮಾತನ್ನು ಬಿಲಾಲ್(ರ) ಪಾಲಿಸಿದರು. ಹೀಗೆ ಇಡೀ ಲೋಕವೇ ನಿದ್ದೆಗೆ ಶರಣಾಗಿರುವಾಗ ಅವರು ಇಸ್ಲಾಮ್ ಸ್ವೀಕರಿಸಿದರು. ಶೋಷಣೆ, ಹಿಂಸೆ ಮರ್ದನದ ದುರಂತಮಯ ದಿನಗಳಿಂದ ಮುಕ್ತಿ ದೊರೆಯಿತು. ಅನಶ್ವರವಾದ ಉನ್ನತಿಯೆಡೆಗೆ ಸಾಗುವ ಅವಕಾಶ ದೊರೆಯಿತು. ಈ ಘಟನೆಯಿಂದ ಅಬೂಬಕರ್(ರ) ಬಹಳ ಸಂತೋಷಗೊಂಡರು. ಅಲ್ಲಾಹನನ್ನು ಸ್ತುತಿಸಿ, ಆತನಿಗೆ ಕೃತಜ್ಞತೆಯನ್ನು ಅರ್ಪಿಸಿದರು.

ಮರುದಿನ ಸಂಜೆ ಭೇಟಿಯಾಗೋಣವೆಂದು ಹೇಳಿ ಈರ್ವರೂ ಬೀಳ್ಕೊಂಡ. ಪ್ರವಾದಿವರ್ಯರನ್ನು ಭೇಟಿಯಾಗಬೇಕೆಂಬ ಬಯಕೆ ತೀವ್ರವಾಗಿತ್ತು. ದೃಷ್ಟಿ ತಲುಪುವವರೆಗೂ ಬಿಲಾಲ್(ರ) ಸಂಗಾತಿಯನ್ನು ನೋಡುತ್ತಾ ನಿಂತರು. ಗುಲಾಮಗಿರಿಯ ಭಯಾನಕತೆಯಿಂದ ನರಳುತ್ತಿದ್ದ ತನಗೆ ಹೊಸ ಜೀವನವನ್ನು ನೀಡಿದ ಆ ಮಹಾಪುರುಷನನ್ನು ನೋಡುತ್ತಾ ಮೈಮರೆತರು. ಕೆಲವು ನಿಮಿಷಗಳ ಹಿಂದೆ ಬಿಲಾಲ್‌ರ(ರ) ಯಜಮಾನ ಉಮಯ್ಯ ಆಗಿದ್ದ, ಪರಮಾಧಿಕಾರವೂ ಅವನದೇ ಆಗಿತ್ತು. ಆದರೆ ಈಗ ಬಿಲಾಲ್‌ರ(ರ) ಮೇಲೆ ಆತನ ಅಧಿಕಾರ ಹಾಗೂ ಒಡೆತನ ಕಳೆದು ಹೋಗಿದೆ. ಅಲ್ಲಾಹನಲ್ಲದೆ ಬೇರೆ ಯಾರಿಗೂ ಅಧಿಕಾರವಿಲ್ಲ, ಆರಾಧನೆ, ಅನುಸರಣೆ, ಅರ್ಪಣೆ ಹಾಗೂ ದಾಸ್ಯತನವೆಲ್ಲವೂ ಅವನಿಗೆ ಮಾತ್ರ ಎಂದು ಘೋಷಿಸಿ ಆಗಿದೆ.

ಬಿಲಾಲ್(ರ) ನಿದ್ರಿಸಲು ಪ್ರಯತ್ನಿಸಿದರೂ ನಿದ್ದೆ ಹತ್ತಿರವೂ ಸುಳಿಯಲಿಲ್ಲ, ಮನ ತುಂಬಾ ಪ್ರವಾದಿವರ್ಯರೇ(ಸ) ತುಂಬಿದ್ದರು. ಬತ್‌ವಾ ಕಣಿವೆಯಲ್ಲಿ ಹಲವು ಬಾರಿ ನೋಡಿದ ಆ ದೇವದೂತನ ಚಿತ್ರವೇ ಕಣ್ಣ ಮುಂದೆ ಸುಳಿಯುತ್ತಿತ್ತು. ಕೆಂಪು ಮಿಶ್ರಿತ ಬಿಳಿಬಣ್ಣ, ಹುಣ್ಣಿಮೆಯ ಚಂದ್ರನಂತೆ ಪ್ರಕಾಶಿಸುವ ಮುಖ, ಸುಂದರವಾದ ಕಣ್ಣುಗಳು, ಆಕರ್ಷಕ ಮುಖಭಾವ, ಕಿವಿಯಿಂದ ಕೆಳಗಿನವರೆಗೆ ಇಳಿದಿರುವ ಗುಂಗುರು ಕೂದಲುಗಳು, ನೀಳವಾದ ಮೂಗು, ಹೊಳೆಯುವ ಹಲ್ಲುಗಳು, ಆಕರ್ಷಕ ವ್ಯಕ್ತಿತ್ವದ ಆ ಮಹಾನ್ ವ್ಯಕ್ತಿಯನ್ನು ಅಲ್ಲಾಹನು ತನ್ನ ಪ್ರವಾದಿಯಾಗಿ ಆರಿಸಿಕೊಂಡನು. ಹೀಗೆ ಮರ್ದಕರಿಂದ ಶೋಷಿತರಿಗೆ ಮುಕ್ತಿಯನ್ನು ನೀಡುವ ಕ್ರಾಂತಿಕಾರಿ ವ್ಯಕ್ತಿಯ ಉದಯವಾಗಿದೆ.

ಪುರೋಹಿತನ ಮಾತುಗಳು ಸತ್ಯವಾದವು. ಮಾನವನು ಸ್ವತಃ ಮಾನವನನ್ನೇ ಗುಲಾಮನಾಗಿಸುವ ಶೋಚನೀಯಾವಸ್ಥೆ ಕೊನೆಗೊಳ್ಳುವುದಲ್ಲದೆ, ಅದಕ್ಕೆ ಕಾವಲಾಗಿರುವ ವಿಗ್ರಹಗಳೂ ಕೂಡಾ ನಾಶವಾಗುತ್ತದೆ. ಸರ್ವ ಮಾನವರೂ ಸಮಾನರೆಂಬ ಮಹಾನ್ ಸಿದ್ಧಾಂತ ಜಾರಿಗೆ ಬರುವುದು. ಬಿಲಾಲ್‌ರ(ರ) ಮನಸ್ಸು ಸುಂದರವಾದ ಕಲ್ಪನಾ ಲೋಕದಲ್ಲಿ ವಿಹರಿಸಿತು.

ಮರುದಿನ ಸಾಯಂಕಾಲ ಅಬೂಬಕರ್ ಮತ್ತು ಬಿಲಾಲ್ ಪ್ರವಾದಿವರ್ಯರನ್ನು ಭೇಟಿಯಾಗಲು ಬಂದರು. ಪರಸ್ಪರ ಪರಿಚಯ ಹಾಗೂ ಕುಶಲ ಸಂಭಾಷಣೆಯ ಬಳಿಕ ಅನುಸರಣೆಯ ಪ್ರತಿಜ್ಞೆ ಮಾಡಲಾಯಿತು. ಬಿಲಾಲ್‌ರಿಗೆ ಇಸ್ಲಾಮ್‌ನ ಮೂಲಭೂತ ವಿಶ್ವಾಸ ಮತ್ತು ಶಿಷ್ಟಾಚಾರಗಳ ಬಗ್ಗೆ ವಿವರಿಸಲಾಯಿತು. ಬಿಲಾಲ್ ಅದನ್ನು ಗಮನಕೊಟ್ಟು ಆಲಿಸಿದರು. ಸ್ವಲ್ಪ ಹೊತ್ತು ಅಲ್ಲಿದ್ದು ತನ್ನನ್ನು ಯಾರೂ ಗಮನಿಸುತ್ತಿಲ್ಲವೆಂದು ಖಾತ್ರಿಯಾದ ಬಳಿಕ ಮನೆಗೆ ಮರಳಿದರು.

ಒಮ್ಮೆ ಪ್ರವಾದಿವರ್ಯರು(ಸ) ಹೇಳಿದರು; 'ಇತಿಯೋಪಿಯಾದ ಪ್ರಥಮ ಮುಸ್ಲಿಮ್ ಬಿಲಾಲ್ ಆಗಿದ್ದಾರೆ.' ಇನ್ನೊಂದು ಸಂದರ್ಭದಲ್ಲಿ ಅವರು ಹೇಳಿದರು, ಇತಿಯೋಪಿಯದವರನ್ನು ಇಸ್ಲಾಮ್‌ಗೆ ಸೇರಿಸಿಕೊಳ್ಳಿ, ಏಕೆಂದರೆ ಅಲ್ಲಿನವರಾದ ಲುಕ್‌ಮಾನ್, ಬಿಲಾಲ್ ಮತ್ತು ನೇಗಸ್ ಈ ಮೂವರೂ ಸ್ವರ್ಗದ ನಾಯಕರಾಗಿದ್ದಾರೆ. ಅಲ್ಲಾಹನ ಬಳಿ ವಿಶೇಷ ಪರಿಗಣಿತರೆಂದು ಹೇಳಲಾಗುವ ಎಂಟು ಮಂದಿಯಲ್ಲಿ ಬಿಲಾಲ್(ರ) ಕೂಡ ಸೇರಿಸಿಕೊಂಡಿದ್ದಾರೆ. ಇವರಲ್ಲದೆ ಖದೀಜ, ಅಲಿ, ಅಬೂಬಕರ್, ಅಮ್ಮಾರ್, ಸುಮಯ್ಯ, ಸುಹೈಬ್, ಮಿಕ್ದಾದ್ ಹಾಗೂ ಝೈದ್ ಬಿನ್ ಹಾರಿಸ್(ರ) ಮೊದಲಾದ ಅದೃಷ್ಟಶಾಲಿಗಳೂ ಇದ್ದಾರೆ.

# ಉಮಯ್ಯನನ್ನು ನಡುಗಿಸಿದ ಸುದ್ದಿ

ಅದೊಂದು ದಿನ ಉಮಯ್ಯ ಮನೆಯಿಂದ ಹೊರಟ. ಅಂತರಂಗ ಅಲ್ಲೋಲ ಕಲ್ಲೋಲವಾಗಿತ್ತು. ಹೊಸ ಧರ್ಮ ದಿನೇ ದಿನೇ ಪ್ರಬಲವಾಗುತ್ತಿದೆ. ವಿಶ್ವಾಸಕ್ಕೆ ಅರ್ಹರಾದ ವಿಶಾಲ ಮನೋಭಾವದವರೆಂದು ಹೆಸರು ಗಳಿಸಿದ ವರ್ತಕರು, ಮುಖಂಡರು ಮುಹಮ್ಮದರಲ್ಲಿ ವಿಶ್ವಾಸವಿರಿಸಿದ್ದಾರೆ. ದುರ್ಬಲರು, ದರಿದ್ರರು ಅವರಲ್ಲಿ ಅಭಯ ಪಡೆಯುತ್ತಿದ್ದಾರೆ. ಗುಲಾಮರೂ, ಮರ್ದಿತರೂ ಇಸ್ಲಾಮ್ ಸ್ವೀಕರಿಸುತ್ತಿದ್ದಾರೆ. ಆತನ ಹೊಸ ಧರ್ಮವು ಮಕ್ಕಾದಲ್ಲಿ ಚರ್ಚಾ ವಿಷಯವಾಗಿದೆ. ಆದ್ದರಿಂದ ಅದನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ. ಇಡೀ ಸಮಾಜದ ಸ್ವಾಸ್ಥ್ಯವನ್ನು ಕೆಡಿಸುತ್ತಿರುವ ಆ ಕುಲದ್ರೋಹಿಯನ್ನು ಅಣಗಿಸುವ ಬಗ್ಗೆ ಆಲೋಚಿಸ ಬೇಕಾಗಿದೆ. ಉಮಯ್ಯ ದಾರುನ್ನದ್ವಾದ ಕಡೆಗೆ ನಡೆದರು. ಅಲ್ಲಿ ಅಬೂಜಹಲ್, ಅಬೂಲಹಬ್, ಅಬೂ ಸುಫ್‌ಯಾನ್ ಒಟ್ಟುಗೂಡಿದ್ದಾರೆ.

ಇಸ್ಲಾಮ್‌ನ ಸಂದೇಶ ಪ್ರಚಾರಗಿಟ್ಟಿಸಿಕೊಳ್ಳುತ್ತಿರುವುದು ಕುರೈಶ್ ಪ್ರಮುಖರನ್ನು ಕುಪಿತಗೊಳಿಸಿತು. ಮನದ ಶಾಂತಿ ಹಾಗೂ ಸ್ವಸ್ಥ ನಿದ್ದೆಯನ್ನು ಕೆಡಿಸಿತು. ತಮ್ಮ ನಾಯಕ ಸ್ಥಾನ ಕಳೆದು ಹೋಗುತ್ತದೆಂದು ಭಯಪಟ್ಟರು. ಅಧಿಕಾರ, ಗೌರವ, ಸ್ಥಾನಮಾನ ಕೈಜಾರುವುದೆಂದು ಭಾವಿಸಿದರು. ಆದ್ದರಿಂದ ಹೊಸ ಧರ್ಮವನ್ನು ಮೊಳಕೆಯಲ್ಲೇ ಚಿವುಟಿ ಬಿಡುವುದು ಅನಿವಾರ್ಯ. ಅಲ್ಲದೆ ಪೂರ್ವಿಕರ ಆಚಾರ ವಿಚಾರಗಳನ್ನು ಖಂಡಿಸುವವರನ್ನು ಹಾಗೆಯೇ ಬಿಟ್ಟುಬಿಡುವುದು ವಿನಾಶಕ್ಕೆ ಹೇತು ಎಂದು ಭಾವಿಸಿ ಕುರೈಶ್ ಪ್ರಮುಖರು ತಮ್ಮ ಸಂಪೂರ್ಣ ಸಮಯ ಹಾಗೂ ಶಕ್ತಿಯನ್ನು ಅದರ ವಿರುದ್ಧವೇ ಕೇಂದ್ರೀಕರಿಸಿದರು.

ದಾರಿಯಲ್ಲಿ ವೇಗವಾಗಿ ನಡೆಯುತ್ತಿದ್ದ ಔಫ್‌ರ ಪುತ್ರನನ್ನು ನೋಡಿ ಉಮಯ್ಯ ಜೋರಾಗಿ 'ಅಬ್ದು ಅಮ್ರ್! ಅಬ್ದು ಅಮ್ರ್!' ಎಂದು ಕರೆದ. ಆತ ಕೂಗು ಕೇಳಿಸಲೇ ಇಲ್ಲವೆಂಬಂತೆ ಮುಂದೆ ಸಾಗಿದ. ಪುನಃ ಕರೆದಾಗಲೂ ಯಾವುದೇ ಪ್ರತಿಕ್ರಿಯೆಯಿಲ್ಲ. ಏನೋ ಅಚಾತುರ್ಯ ನಡೆದಿದೆಯೆಂದು ಭಾವಿಸಿ ಉಮಯ್ಯ ಬೇಗ ಬೇಗ ನಡೆದು ಆತನನ್ನು ಸಮೀಪಿಸಿ ಭುಜ ತಟ್ಟಿದನು 'ನೀನೂ ನಾಶವಾದೆಯಾ? ಮುಹಮ್ಮದ್ ನಿನ್ನನ್ನೂ ದಾರಿ

ತಪ್ಪಿಸಿದನೇ? ಪೂರ್ವಿಕರ ಧರ್ಮವನ್ನು ತ್ಯಜಿಸಿ ಹೊಸ ಧರ್ಮ ಸೇರಿದೆಯಾ? ನಿನ್ನ ಹೆಸರನ್ನು ಕರೆದರೂ ಯಾಕೆ ನಿಲ್ಲಲಿಲ್ಲ? ತಂದೆ ಇಟ್ಟ ಹೆಸರನ್ನು ಬದಲಾಯಿಸಿದೆಯಾ? ಒಂದೇ ಉಸಿರಿನೊಂದಿಗೆ ಆತ ಪ್ರಶ್ನಿಸಿದ.

'ಮುಹಮ್ಮದ್ ನನಗೆ ದ್ರೋಹವೆಸಗಿಲ್ಲ, ಬದಲಾಗಿ ಸನ್ಮಾರ್ಗ ತೋರಿಸಿ ಕೊಟ್ಟಿದ್ದಾರೆ. ನಾನು ಸತ್ಯಧರ್ಮವನ್ನು ಸ್ವೀಕರಿಸಿದ್ದೇನೆ. ಪ್ರವಾದಿವರ್ಯರು(ಸ) ನನಗೆ ಅಬ್ದುರ್ರಹ್ಮಾನ್ ಎಂಬ ಹೆಸರಿಟ್ಟಿದ್ದಾರೆ.' ಇಬ್ನು ಔಫ್ ಸ್ಪಷ್ಟಪಡಿಸಿದರು. ಆಗ ಅವರಿಬ್ಬರ ನಡುವೆ ತೀವ್ರ ವಾಗ್ವಾದ ನಡೆದವು. ಉಮಯ್ಯ ಗೆಳೆಯನನ್ನು ಮೊದಲ ಧರ್ಮಕ್ಕೆ ಮರಳುವಂತೆ ಪ್ರೇರೇಪಿಸಿದ. ಅಬ್ದುರ್ರಹ್ಮಾನ್ ಬಿನ್ ಔಫ್ ಗೆಳೆಯನನ್ನು ಸತ್ಯಮಾರ್ಗಕ್ಕೆ ಆಹ್ವಾನಿಸಿದರು.

ಇಬ್ನು ಔಫ್‌ರಿಂದ ಬೀಳ್ಕೊಂಡ ಉಮಯ್ಯ ನೇರವಾಗಿ ದಾರುನ್ನದ್‌ವಾಕ್ಕೆ ತಲುಪಿದರು. ಕುರೈಶ್ ಪ್ರಮುಖರೆಲ್ಲಾ ಅಲ್ಲಿ ನೆರೆದಿದ್ದರು. ಎಲ್ಲರ ಮಾತಲ್ಲೂ ಮುಹಮ್ಮದ್‌ರ(ಸ) ಬಗೆಗಿನ ಆಕ್ಷೇಪ ಹಾಗೂ ತಿರಸ್ಕಾರ ವ್ಯಕ್ತವಾಗುತ್ತಿತ್ತು. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಹೇಳುತ್ತಿದ್ದರು. ಮುಹಮ್ಮದ್ ಹುಚ್ಚ, ಅವನೊಬ್ಬ ಕವಿ, ಪೂರ್ವಿಕರ ಆಚಾರ ವಿಚಾರಗಳನ್ನು ತೆಗಳುವ ಭ್ರಷ್ಟ, ಅವನು ನಮ್ಮ ಪವಿತ್ರ ದೇವಮಂದಿರಿಗೆ ಅಗೌರವ ತೋರಿಸುತ್ತಾನೆ. ಅವನು ಕುಟುಂಬ ಸಂಬಂಧವನ್ನು ಮುರಿದ ಕುಲದ್ರೋಹಿಯಾಗಿದ್ದಾನೆ. ದೇವನು ಒಬ್ಬನೇ ಎಂದು ಹೇಳುವುದು ದೇವನಿಂದನೆಯಲ್ಲದೆ ಇನ್ನೇನು?...

'ನಾವು ಇನ್ನು ಮುಂದೆಯೂ ಇದನ್ನು ಹೀಗೆಯೇ ಇರಗೊಟ್ಟರೆ ದೇವತೆಗಳು ನಮ್ಮಲ್ಲಿ ಕೋಪಿಸಬಹುದು. ನಾವು ಅವರ ಅನುಗ್ರಹಗಳಿಂದ ವಂಚಿತರಾಗಬೇಕಾದೀತು.'

ನಮ್ಮ ಕುಟುಂಬ, ಕುಲ, ಗೋತ್ರ ಹಾಗೂ ಇಡೀ ಅರೇಬಿಯಾಕ್ಕೆ ಮುಹಮ್ಮದ್‌ರಿಂದ ಅವಮಾನವಾಗಿದೆ. ಗುಲಾಮನನ್ನು ದತ್ತು ಪುತ್ರನಾಗಿ ಸ್ವೀಕರಿಸಿ ನಮ್ಮ ಮರ್ಯಾದೆ ಕಳೆದಿದ್ದಾನೆ.

'ಮುಹಮ್ಮದ್‌ನೊಂದಿಗೆ ಸೇರಿದ ಬಡ ದರಿದ್ರರನ್ನು ಧಿಕ್ಕಾರಿಗಳನ್ನಾಗಿಸುತ್ತಿದ್ದಾನೆ. ಯಜಮಾನರ ಅನುಸರಣೆಯಿಂದ ತಡೆಯುತ್ತಿದ್ದಾನೆ. ಇದು ನಿಲ್ಲಲೇ ಬೇಕು.'

'ಆತ ಹುಚ್ಚನಲ್ಲ, ಓರ್ವ ದ್ರೋಹಿಯೂ ಅಹಂಕಾರಿಯೂ ಹೌದು. ಆದ್ದರಿಂದ ಅವನಿಗೊಂದು ಪಾಠ ಕಲಿಸಲೇಬೇಕು' ಅಬೂಲಹಬ್‌ನ ಉವಾಚ.

'ನಮಗೆ ಅಪಾಯಕಾರಿಯಾದ ಹಲವಾರು ವಿಷಯಗಳನ್ನು ಆತ ಪ್ರಚಾರ ಮಾಡುತ್ತಿದ್ದಾನೆ. ಎಲ್ಲರೂ ಬಾಚಣಿಗೆಯ ಹಲ್ಲುಗಳಂತೆ ಸಮಾನರಂತೆ. ಗುಲಾಮ ಮತ್ತು ಯಜಮಾನರ ನಡುವೆ ಯಾವುದೇ ವ್ಯತ್ಯಾಸವಿಲ್ಲ, ಕರಿಯ ಗುಲಾಮರು ಹಾಗೂ ನಾವು ಒಂದೇ ರೀತಿ ಸಮಾನರು. ಇದೆಂತಹ ದುರ್ಗತಿ? ಆತನ ಸಂದೇಶ ನಮಗೆ ವಿರುದ್ಧವಾಗಿದೆ. ನಮ್ಮ ಅಧಿಕಾರ ಹಾಗೂ ಸ್ಥಾನಮಾನಕ್ಕೆ ಕಂಟಕಪ್ರಾಯವಾಗಿದೆ. ಇದನ್ನು ಹೀಗೇ ಮುಂದುವರಿಯಲು ಬಿಡಬಾರದು' ಅಬೂಜಹಲ್ ಹೇಳಿದ.

'ಮುಹಮ್ಮದ್ ಕಳ್ಳ, ಕವಿ, ಹುಚ್ಚ ಅಥವಾ ಜ್ಯೋತಿಷಿ ಅಲ್ಲ, ನಮ್ಮ ದೇವಂದಿರ ಶಾಪಕೋಪಕ್ಕೆ ಪಾತ್ರನಾದ ದೌರ್ಭಾಗ್ಯಶಾಲಿ.' ಉಮಯ್ಯ ತನ್ನ ಅಭಿಪ್ರಾಯ ವ್ಯಕ್ತಪಡಿಸಿದ.

'ನಿಜವಾದ ದೌರ್ಭಾಗ್ಯವಂತರು ನಾವು. ಮುಹಮ್ಮದ್ ಅಲ್ಲ.' ಇನ್ನೋರ್ವ ಉಮಯ್ಯನ ಮಾತನ್ನು ವಿರೋಧಿಸಿದ.

'ಅದು ಹೇಗೆ?' ಉಮಯ್ಯ ಪ್ರಶ್ನಿಸಿದ.

'ನಮ್ಮ ಗುಲಾಮರು ಕೂಡಾ ಅವರೊಂದಿಗೆ ಸೇರಿಕೊಂಡಿದ್ದಾರೆ.'

'ನಮ್ಮ ಗುಲಾಮರು?' ಉಮಯ್ಯ ಆಶ್ಚರ್ಯದಿಂದ ಕೇಳಿದ.

'ಹೌದು, ತಮ್ಮ ಗುಲಾಮ ಬಿಲಾಲ್ ಕೂಡಾ ಅವನೊಂದಿಗೆ ಸೇರಿದ್ದಾನೆ.' ಇದು ಉಮಯ್ಯನಿಗೆ ತೀವ್ರ ಆಘಾತವನ್ನುಂಟು ಮಾಡಿತು. ಇಂತಹ ಘಟನೆ ನಡೆಯಬಹುದೆಂದು ಕನಸಿನಲ್ಲೂ ಯೋಚಿಸಿರಲಿಲ್ಲ. ಆದ್ದರಿಂದ ನಂಬುವುದೇ ಕಷ್ಟವಾಯಿತು. ವಿಷಯ ದೃಢಪಡಿಸಲು, 'ಸರಿಯಾಗಿ ತಿಳಿದೇ ಮಾತನಾಡುತ್ತಿದ್ದೀರಾ?' ಎಂದು ಕೇಳಿದ.

'ಹೌದು! ಮುಹಮ್ಮದ್‌ನನ್ನು ಭೇಟಿಯಾಗಲು ಬಿಲಾಲ್ ಹಲವು ಬಾರಿ ಹೋಗುವುದನ್ನು ನಾನು ನೋಡಿದ್ದೇನೆ.' 'ಎಂತಹ ಉದ್ಧಟತನ! ನನ್ನ ಅನುಮತಿಯಿಲ್ಲದೆ ಹೊರಗೆ ಹೋಗುವುದೇ? ಮುಹಮ್ಮದನಲ್ಲಿ ವಿಶ್ವಾಸವಿರಿಸುವುದೇ? ಉಮಯ್ಯ ಕೋಪದಿಂದ ಆರ್ಭಟಿಸಿದ.

'ನಾನು ಹೇಳುತ್ತಿರುವುದೂ ಅದೇ ವಿಷಯ. ಮುಹಮ್ಮದ್ ಗುಲಾಮರನ್ನು ಧಿಕ್ಕಾರಿಗಳನ್ನಾಗಿಸುತ್ತಿದ್ದಾನೆ!' ಅಬೂ ಸುಫ್‌ಯಾನ್ ಹೇಳಿದ. ಎಲ್ಲರೂ ಕೋಪದಿಂದ ಕಿಡಿಕಿಡಿಯಾಗಿದ್ದರು. ಉಮಯ್ಯ ಅಪಸ್ಮಾರ ರೋಗಿಯಂತೆ ನಡುಗಲಾರಂಭಿಸಿದ. ಅಬೂಜಹಲನ ಸ್ಥಿತಿಯೂ ಭಿನ್ನವಾಗಿರಲಿಲ್ಲ, ಗೆಳೆಯನ ಸ್ಥಿತಿ ನೋಡಿ ಆತ ಹೇಳಿದ:

'ಮುಹಮ್ಮದ್‌ನ ಸಂದೇಶ ಗುಲಾಮ ಹಾಗೂ ದುರ್ಬಲರನ್ನು ಅತಿಯಾಗಿ ಆಕರ್ಷಿಸಿದೆ. ಪೂರ್ವಿಕರ ದೇವಂದಿರನ್ನು ನಿರಾಕರಿಸುವವರು ಅವನ ಸುತ್ತಲೂ ನೆರೆಯುತ್ತಿದ್ದಾರೆ. ಆದ್ದರಿಂದ ನಾವಿನ್ನು ಸುಮ್ಮನಿರುವುದು ತರವಲ್ಲ, ಅದು ನಮ್ಮನ್ನು ನಾಶಗೊಳಿಸುವ ಮೊದಲು ನಾವು ಅದನ್ನು ಇಲ್ಲವಾಗಿಸಬೇಕು. ಇನ್ನು ತಡಮಾಡದೆ ಅವರ ವಿರುದ್ಧ ಯುದ್ಧ ಸಾರಬೇಕು. ಇದರ ಹೊರತು ಬೇರೇನೂ ದಾರಿ ಗೋಚರಿಸುತ್ತಿಲ್ಲ, ಕರುಣೆ, ದಯೆ, ಪ್ರೀತಿ, ವಾತ್ಸಲ್ಯ ಎಲ್ಲವನ್ನೂ ಬದಿಗಿರಿಸಬೇಕು.

'ಉಮಯ್ಯ! ಹೋಗು ನಿನ್ನ ಆ ಮೂರ್ಖ ಗುಲಾಮನಿಗೆ ಪಾಠ ಕಲಿಸು. ಆತನ ಧಿಕ್ಕಾರಕ್ಕೆ ಸೂಕ್ತವಾದ ಶಿಕ್ಷೆಯನ್ನು ನೀಡು! ಆ ಶಿಕ್ಷೆ ಧರ್ಮ ವಿರೋಧಿಗಳೆಲ್ಲರಿಗೆ ಒಂದು ಎಚ್ಚರಿಕೆಯಾಗಲಿ. ಶಿಕ್ಷೆಯು ಲಘುವಾಗಿರದೆ ಎಲ್ಲರೂ ಭಯಪಡುವಂತಿರಬೇಕು. ಯಾವುದೇ ದಯೆ, ದಾಕ್ಷಿಣ್ಯ ಇರಬಾರದು. ಇನ್ನು ಮುಂದೆ ಯಾರಿಗೂ ಕೂಡ ಇಸ್ಲಾಮ್ ಸ್ವೀಕರಿಸುವ

ಧೈರ್ಯ ಬರಬಾರದು. ಆ ಧಿಕ್ಕಾರಿಗಳು ದಯೆ, ಕಾರುಣ್ಯಕ್ಕೆ ಖಂಡಿತವಾಗಿಯೂ ಅರ್ಹರಲ್ಲ. ಈ ಹೊಸ ಧರ್ಮವನ್ನು ಕೊನೆಗೊಳಿಸದೆ ನಮಗೆ ಜೀವಿಸಲು ಸಾಧ್ಯವಿಲ್ಲ. ಮುಹಮ್ಮದ್ ಹಾಗೂ ಅವನ ಸಂಗಾತಿಗಳು ನಮ್ಮ ದೇವರುಗಳಿಗೆ ಮಾಡಿದ ಅಪಮಾನವನ್ನು ತೊಳೆಯದ ಜೀವನ ನಮಗೆ ಯಾಕೆ? ಅಬೂ ಜಹಲ್ ಉದ್ರೇಕಿಸಿದ.

'ಮುಹಮ್ಮದ್ ನನ್ನ ಸೋದರನ ಪುತ್ರ ಹೌದು. ಆದರೆ ಇಂದು ಇಡೀ ಕುಟುಂಬ ಹಾಗೂ ಕುಲಗೋತ್ರಗಳಿಗೆ ಅವನು ಅವಮಾನ ಮಾಡಿದ್ದಾನೆ. ಅವನ ಪ್ರಚಾರವು ನಮ್ಮ ನಿದ್ದೆಗೆಡಿಸಿದೆ. ನಾವು ಅವನನ್ನು ಸುಳ್ಳುಗಾರ, ಹುಚ್ಚ, ಕವಿ ಮುಂತಾಗಿ ಹೇಳಿಕೊಂಡು ನಡೆದರೆ ಏನೂ ಪ್ರಯೋಜನವಿಲ್ಲ. ಅದನ್ನು ಜನರು ನಂಬುವುದೂ ಇಲ್ಲ. ಆತ ಸುಳ್ಳು ಹೇಳುವುದಿಲ್ಲ ವೆಂಬುದು ಎಲ್ಲರಿಗೂ ತಿಳಿದ ಸತ್ಯ. ಸತ್ಯಸಂಧ, ಪ್ರಾಮಾಣಿಕ ಹಾಗೂ ವಿಶ್ವಾಸಾರ್ಹನೆಂದು ಹೇಳಿ ಇದುವರೆಗೆ ನಾವವನನ್ನು ಮಧ್ಯವರ್ತಿಯನ್ನಾಗಿ ಮಾಡುತ್ತಿದ್ದೆವು. ಆದರೆ ಇಂದು ಅವನು ನಮ್ಮ ಕಠಿಣ ಶತ್ರು. ಅವನಿಗೆ ಏನೇ ಸಂಕಷ್ಟ ಬಂದರೂ ನನಗೆ ಅದು ಸಂತೋಷ. ಕುಟುಂಬ ಸಂಬಂಧ ನನಗೆ ಅಡ್ಡಿಯೇ ಅಲ್ಲ.' ಅಬೂಲಹಬ್ ಅಭಿಪ್ರಾಯ ವ್ಯಕ್ತಪಡಿಸಿದ.

'ನಮ್ಮ ಪ್ರಯತ್ನದ ಆರಂಭ ಬಿಲಾಲ್‌ನಿಂದಲೇ ಆಗಲಿ. ಆ ಧಿಕ್ಕಾರಿಗೆ ಸರಿಯಾದ ಪಾಠ ಕಲಿಸಬೇಕು. ಗುಲಾಮ ಜೀವನ ನಡೆಸುವುದನ್ನು ಬಿಟ್ಟು ಪದೇ ಪದೇ ಮುಹಮ್ಮದನನ್ನು ಭೇಟಿಯಾಗುತ್ತಿದ್ದಾನೆ. ಉಮಯ್ಯ ಇನ್ನು ತಡ ಮಾಡಬೇಡ.' ಅಬೂಜಹಲ್ ಹುರಿದುಂಬಿಸಿದ. ಉಮಯ್ಯನಿಗೆ ಈ ಎಲ್ಲಾ ಮಾತುಗಳು ಉರಿಯುತ್ತಿರುವ ಬೆಂಕಿಗೆ ಎಣ್ಣೆ ಸುರಿದಂತಾಯಿತು. ಬಿಲಾಲ್‌ನನ್ನು ಚಚ್ಚಬೇಕು. ಚಿತ್ರಹಿಂಸೆ ನೀಡಿ ಅವನನ್ನು ಕೊಲ್ಲಬೇಕೆಂದು ಉಮಯ್ಯನ ಯೋಜನೆಯಾಗಿತ್ತು. ಅಬೂಜಹಲ್‌ನ ಮಾತುಗಳು ಇದಕ್ಕೆ ಬಲನೀಡಿದವು.

ಅರೇಬಿಯಾದ ಪ್ರಸಿದ್ಧ ಶ್ರೀಮಂತ ವರ್ತಕರಲ್ಲಿ ಉಮಯ್ಯನೂ ಒಬ್ಬ. ಆತನ ವ್ಯಾಪಾರ ಇಡೀ ಅರೇಬಿಯಾವನ್ನು ವ್ಯಾಪಿಸಿತ್ತು. ಶ್ರೀಮಂತಿಕೆಯು ಆತನನ್ನು ಕುರುಡಾಗಿಸಿತ್ತು. ಈಗ ತನ್ನ ಸ್ವಾಭಿಮಾನಕ್ಕೆ ಬಿದ್ದ ಹೊಡೆತ ಹಾಗೂ ತಮ್ಮ ಸ್ಥಾನಮಾನ ಕುಸಿಯುತ್ತಿರುವುದು ಅಸಹನೀಯವಾಗಿತ್ತು. ಅಲ್ಲದೆ ಈಗ ಸ್ವಂತ ಗುಲಾಮನೂ ನನ್ನನ್ನು ಧಿಕ್ಕರಿಸಿದ್ದಾನೆ. ತನ್ನದಲ್ಲದ ಧರ್ಮವನ್ನು ಅಂಗೀಕರಿಸಿದ್ದಾನೆ. ನಮ್ಮ ಪೂರ್ವಿಕರ ಆಚಾರ ವಿಚಾರಗಳನ್ನು ನಿರಾಕರಿಸುತ್ತಿದ್ದಾನೆ!

ಉಮಯ್ಯನ ಸ್ಥಿತಿ ಸ್ಫೋಟಗೊಳ್ಳಲು ಸಿದ್ಧವಾಗಿನಿಂತ ಅಗ್ನಿಪರ್ವತದಂತಿತ್ತು. ಬಿಲಾಲ್‌ರಿಗೆ ಸೂಕ್ತ ಪಾಠ ಕಲಿಸುತ್ತೇನೆಂಬ ಪ್ರತಿಜ್ಞೆಯಿಂದ ದಾರುನ್ನದ್ವಾದಿಂದ ಹೊರಗೆ ಬಂದ. ಅಲ್ಲಿಂದ ಹೊರಡುವಾಗ ಜೋರಾಗಿ ಘೋಷಿಸಿದ, 'ಆ ನೀಚನ ಇಸ್ಲಾಮನ್ನು ಕೊನೆಗೊಳಿಸದೆ ಇಂದು ಸೂರ್ಯ ಅಸ್ತಮಿಸದು.'

✤ ✤ ✤

# ಅಚಂಚಲ ವಿಶ್ವಾಸ

'ನೀನು ಹೇಳುತ್ತಿರುವುದೇನು?' ಉಮಯ್ಯ ಹೇಳಿದ.

ಆತ ದಾರುನ್ನದ್ವದಿಂದ ನೇರವಾಗಿ ಬಿಲಾಲ್‌ರ ಬಳಿ ತಲುಪಿದನು. ಆ ಸಂದರ್ಭದಲ್ಲಿ ಬಿಲಾಲ್ ಕುರ್‌ಆನ್ ಪಾರಾಯಣ ಮಾಡುತ್ತಿದ್ದರು. ಗುಲಾಮರ ಡೇರೆಗಳಲ್ಲಿ ಬೇರೆ ಯಾರೂ ಇರಲಿಲ್ಲ. ಓದುವ ಸ್ವರ ಕೇಳಿದಾಗಲೇ ಉಮಯ್ಯನಿಗೆ ವಿಷಯ ಮನದಟ್ಟಾಯಿತು. ಮುಹಮ್ಮದ್ ಹೇಳುತ್ತಿರುವ ಅದೇ ವಾಕ್ಯಗಳು. ಗದ್ಯವಲ್ಲ, ಇದು ಪದ್ಯವೂ ಅಲ್ಲ, ಎರಡೂ ಅದರಲ್ಲಿ ಮೇಳೈಸಿದೆ. ನಿಜವಾಗಿಯೂ ಮನೋಹರವಾದ ಆಕರ್ಷಕ ಶೈಲಿ. ಅದನ್ನು ಪ್ರತಿಪಾದಿಸುವ ಶೈಲಿ ಹೃದಯ ತಟ್ಟುವಂತಿದೆ. ಕಅಬಾದಲ್ಲಿ ತೂಗು ಹಾಕಿರುವ ಎಲ್ಲಾ ಕವಿತೆಗಳಿಗಿಂತಲೂ ಬಹಳ ಮೇಲ್ಪಟ್ಟದವುಗಳು ಎಂದು ಹೇಳಿದ ಅಬೂಜಹಲ್‌ನ ಮಾತು ನಿಜವೆಂದು ಉಮಯ್ಯನಿಗೆ ಭಾಸವಾಯಿತು.

ಉಮಯ್ಯನ ಕಣ್ಣುಗಳು ಕೋಪದಿಂದ ಕಿಡಿಕಾರುತ್ತಿದ್ದವು. ಮುಖಭಾವವು ಬರಲಿರುವ ಭಯಾನಕತೆಯನ್ನು ಸೂಚಿಸುತ್ತಿತ್ತು. ಆತ ಕೇಳಿದ ಪ್ರಶ್ನೆ, ಅದೊಂದು ಘರ್ಜನೆಯಂತಿತ್ತು. ಆದ್ದರಿಂದ ವಿಷಯ ಯಜಮಾನರಿಗೆ ತಿಳಿದಿದೆಯೆಂದು ಬಿಲಾಲ್‌ರಿಗೆ ವ್ಯಕ್ತವಾಯಿತು. ಇನ್ನು ಏನೂ ಅಡಗಿಸುವ ಅಗತ್ಯವಿಲ್ಲವೆಂದು ತಿಳಿದು ಧೈರ್ಯದಿಂದ 'ನಾನು ದಿವ್ಯ ವಚನಗಳನ್ನು ಓದುತ್ತಿದ್ದೇನೆ' ಎಂದು ಹೇಳಿದರು.

'ನಿನ್ನ ದೇವ ಯಾರು? ಅದು ಯಾವಾಗಿನಿಂದ ಮಾತನಾಡಲಾರಂಭಿಸಿದ್ದು?' ಉಮಯ್ಯ ಆರ್ಭಟಿಸಿದ.

'ಸೃಷ್ಟಿಕರ್ತನು ತನ್ನ ದಾಸನಿಗೆ ಅವತೀರ್ಣಗೊಳಿಸಿದ ಗ್ರಂಥವಿದು.' ಬಿಲಾಲ್ ತಗ್ಗಿದ ಸ್ವರದಲ್ಲಿ ಹೇಳಿದರು.

'ಹುಚ್ಚು ಹುಚ್ಚಾಗಿ ಮಾತನಾಡಬೇಡ?'

'ನಿಜವಾಗಿಯೂ ಆತನೇ ನನ್ನ ರಕ್ಷಕ.' ಬಿಲಾಲ್‌ರ ಧ್ವನಿಯು ಮೆಲುಧ್ವನಿಯಾಗಿದ್ದರೂ ದೃಢವಾಗಿತ್ತು.

'ನಿನ್ನ ರಕ್ಷಕ ಯಾರು?'

'ಭೂಮಿ ಆಕಾಶಗಳನ್ನು ಹಾಗೂ ಅವುಗಳ ನಡುವೆ ಇರುವ ಸರ್ವವನ್ನೂ ಸೃಷ್ಟಿಸಿದವನು. ಅವನು ಮಹಾ ಪರಿಶುದ್ಧನು.'

'ನೀನು ನಮ್ಮ ದೇವರುಗಳನ್ನು ಧಿಕ್ಕರಿಸಿ ಆತನನ್ನು ಹಿಂಬಾಲಿಸಲಾರಂಭಿಸಿದೆಯಾ?' ಉಮಯ್ಯ ಕೇಳಿದ.

'ಅಲ್ಲಾಹನು ನನಗೆ ಸನ್ಮಾರ್ಗ ತೋರಿಸಿದ್ದಾನೆ.'

ಉಮಯ್ಯನಿಗೆ ಕೋಪ ಸಹಿಸಲಾಗಲಿಲ್ಲ. ಆತನ ಚಾಟಿ ಬಿಲಾಲ್‌ರ ದೇಹದ ಮೇಲೆ ತುಂಬಾ ಹೊತ್ತಿನ ವರೆಗೆ ಕುಣಿಯಿತು. ಬಿಲಾಲ್‌ರ ಮುಖ, ಬೆನ್ನು ಹಾಗೂ ಮೈಯಲ್ಲೆಲ್ಲಾ ರಕ್ತ ಚಿಮ್ಮಿದವು. ಆದರೆ ಆ ವೀರ ಮುಜಾಹಿದ್‌ನ ಆವೇಶ ಹೆಚ್ಚುತ್ತಲೇ ಇತ್ತು. ಹಿಂದೆ ಈ ಚಾಟಿಯೇಟು ಬಿಲಾಲ್‌ಗೆ ನೋವೆನಿಸುತ್ತಿತ್ತು. ವೇದನೆ ತಾಳಲಾರದೆ ಚಡಪಡಿಸುತ್ತಿದ್ದರು. ಆದರೆ ಇಂದು ಏನೂ ಅನಿಸುತ್ತಿಲ್ಲ. ಏನೂ ಸಂಭವಿಸಿಲ್ಲವೆಂಬಂತೆ ಉಮಯ್ಯನನ್ನೇ ನೋಡುತ್ತಾ ನಿಂತರು. ವಿಶ್ವಾಸದ ಚೈತನ್ಯವು ಬಿಲಾಲ್‌ರಿಂದ ನೋವನ್ನು ಮರೆಸಿತ್ತು. ಅದೊಂದು ಉನ್ನತ ಮಾನಸಿಕ ಸ್ಥಿತಿಯಾಗಿತ್ತು. ಅಪರೂಪವಾಗಿ ಕೆಲವರಿಗೆ ಮಾತ್ರ ಇದು ಪ್ರಾಪ್ತವಾಗುತ್ತದೆ. ಅಚಂಚಲ ವಿಶ್ವಾಸ ಹಾಗೂ ದೃಢಚಿತ್ತತೆ ಇದಕ್ಕೆ ಅನಿವಾರ್ಯವಾಗಿದೆ. ಬಿಲಾಲ್ ಅಪೂರ್ವ ಸಿದ್ಧಿಯ ಉತ್ತಮ ಉದಾಹರಣೆಯಾಗಿದ್ದರು.

ಬಿಲಾಲ್‌ರ ವರ್ತನೆ ಯಾವ ಯಜಮಾನನಿಗೂ ಸಹಿಸಲಸಾಧ್ಯವಾದುದಾಗಿತ್ತು. ಗುಲಾಮನ ಧಿಕ್ಕಾರ ಊಹಿಸಲಸಾಧ್ಯವಾದುದು. ಬಿಲಾಲ್ ತನ್ನ ಸ್ಥಿತಿಯನ್ನು ಮರೆತನೇ? ಎಂಥ ಉದ್ಧಟತನ? ಉಮಯ್ಯನಿಗೆ ಆಶ್ಚರ್ಯವಾಯಿತು.

ದ್ವೇಷದಿಂದ ಉರಿಯುತ್ತಿದ್ದ ಆ ಕುರೈಶ್ ಪ್ರಮುಖ ಹೇಳಿದ: 'ಗುಲಾಮನಿಗೆ ತನ್ನಿಚ್ಛೆಯಂತೆ ಜೀವಿಸುವ ಅವಕಾಶವಿಲ್ಲ. ಯಜಮಾನನದ್ದಲ್ಲದ ಮತವನ್ನು ಅವನು ಸ್ವೀಕರಿಸುವಂತಿಲ್ಲ. 'ನನ್ನ ದೇವರುಗಳೇ ನಿನ್ನ ದೇವರು. ನನ್ನದಲ್ಲದ ಯಾವ ದೇವರನ್ನೂ ನೀನು ಆರಾಧಿಸಬಾರದು. ನಾನು ಬಯಸಿದ್ದೆಲ್ಲವನ್ನೂ ನಿನ್ನಿಂದ ಮಾಡಿಸುತ್ತೇನೆ. ನೀನು ಜೀವಿಸುವುದೇ ನನಗಾಗಿ. ನನ್ನ ವಿಶ್ವಾಸವೇ ನಿನ್ನ ವಿಶ್ವಾಸವಾಗಿರಬೇಕು. ಏಕೆಂದರೆ ನೀನು ನನ್ನ ಗುಲಾಮ.'

'ನಾನು ನಿಮ್ಮ ಗುಲಾಮನೆಂಬುದು ನಿಜ. ನಿಮ್ಮ ಆಜ್ಞೆಯನ್ನು ಪಾಲಿಸಬೇಕಾದುದು ನನ್ನ ಕರ್ತವ್ಯ. ನೀವಿಚ್ಛಿಸುವ ಯಾವುದೇ ಕೆಲಸವನ್ನು ಕೂಡಾ ನನ್ನಿಂದ ಮಾಡಿಸಬಹುದು. ಆದರೆ ನಿಮಗೆ ನನ್ನ ದೇಹದ ಮೇಲೆ ಮಾತ್ರ ಅಧಿಕಾರವಿದೆಯೇ ಹೊರತು ಮನಸ್ಸಿನ ಹಾಗೂ ಆತ್ಮದ ಮೇಲಲ್ಲ. ಯಾವುದರ ಮೇಲೆ ವಿಶ್ವಾಸವಿರಿಸಬೇಕು ಎಂಬ ಸ್ವಾತಂತ್ರ್ಯ ನನಗಿದೆ. ಬೇರೆ ಯಾರಿಗೂ ಇಲ್ಲಿ ಅವಕಾಶವಿಲ್ಲ. ಯಾವುದೇ ವಿಶ್ವಾಸವನ್ನು ನನ್ನ ಮೇಲೆ ಬಲಾತ್ಕಾರವಾಗಿ ಹೇರಲು ಸಾಧ್ಯವೂ ಇಲ್ಲ. ದೇವನು ನನಗೆ ಸನ್ಮಾರ್ಗ ತೋರಿಸಿದ ಬಳಿಕ ಅದರಿಂದ ಹಿಂದೆ ಸರಿಸಲು ಯಾವ ಶಕ್ತಿಗೂ ಸಾಧ್ಯವಿಲ್ಲ. ಆದ್ದರಿಂದ ತಾವು ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡುವುದು ಒಳ್ಳೆಯದು.' ಬಿಲಾಲ್ ದೃಢಸ್ವರದಿಂದ ಹೇಳಿದರು.

'ನಿನಗೆ ಹಿಂದಿನ ಧರ್ಮಕ್ಕೆ ಮರಳುವುದೇ ಉತ್ತಮ. ಇಲ್ಲದಿದ್ದರೆ ಮುಹಮ್ಮದ್ ಮಲಿನಗೊಳಿಸಿದ ನಿನ್ನ ಆತ್ಮ ನಿನಗೆ ನಷ್ಟವಾಗುತ್ತದೆ' ಉಮಯ್ಯ ಹೆದರಿಸಿದ.

'ಮುಹಮ್ಮದ್(ಸ) ಅದನ್ನು ಮಲಿನಗೊಳಿಸಿಲ್ಲ, ಅದನ್ನು ಸಂಸ್ಕರಿಸಿದರು.'

'ಏನು, ನಿನ್ನ ಧಿಕ್ಕಾರವನ್ನು ಮುಂದುವರಿಸುವೆಯಾ? ನನ್ನ ಆಜ್ಞೆಯನ್ನು ಮೀರುವೆಯಾ?'

'ದೇವಾಜ್ಞೆಯನ್ನು ಪಾಲಿಸುವುದು ಅನಿವಾರ್ಯವಾದುದರಿಂದ ನಿಮ್ಮ ಆಜ್ಞೆಯನ್ನು ಮೀರಬೇಕಾಗುತ್ತದೆ.'

'ಅಧಿಕ ಪ್ರಸಂಗವನ್ನು ನಿಲ್ಲಿಸು. ಲಾತ ಮತ್ತು ಉಝ್ಝಾವೇ ಸತ್ಯ. ಹೊಸ ಧರ್ಮವನ್ನು ತೊರೆಯದಿದ್ದರೆ ನಿನ್ನನ್ನು ನಾನು...'

'ನೀವು ನನ್ನನ್ನು ತುಂಡು ತುಂಡುಗಳನ್ನಾಗಿ ಮಾಡಿ ಕೊಂದರೂ ಕೂಡಾ ಸನ್ಮಾರ್ಗದಿಂದ ಮರಳಲಾರೆ.' ಬಿಲಾಲ್ ದಿಟ್ಟ ಸ್ವರದಿಂದ ಹೇಳಿದರು.

ಅವರಿಗೆ ಮರಣವೆಂಬುದು ಹೆಮ್ಮೆಯಾಗಿ ಬದಲಾಗಿತ್ತು. ಗುಲಾಮನಿಗೆ ಬದುಕಿನಲ್ಲಿ ಸುಂದರ ಕನಸುಗಳೇ ಇಲ್ಲ, ಕ್ಷುಲ್ಲಕ ಕಾರಣಗಳಿಗಾಗಿಯೂ ಅವರು ಕೊಲ್ಲಲ್ಪಡುವುದು ಸಾಮಾನ್ಯ. ಸೊಳ್ಳೆಯ ಬೆಲೆ ಕೂಡಾ ಅವರ ಜೀವಕ್ಕಿಲ್ಲ, ಆರೋಗ್ಯವಂತ, ದೃಢಕಾಯದ ಗುಲಾಮರನ್ನು ಕೊಲ್ಲುತ್ತಿರಲಿಲ್ಲ, ಆರ್ಥಿಕ ಸಂಕಷ್ಟದ ದಿನಗಳಾದರೆ ಅವರನ್ನೂ ಕೊಲ್ಲಲಾಗುತ್ತಿತ್ತು. ಆದರೆ ರೋಗಿ, ವೃದ್ಧ ಹಾಗೂ ದುರ್ಬಲರಾದ ಗುಲಾಮರ ಮರಣ ಯಾರಿಗೂ ದುಃಖ ನೀಡುತ್ತಿರಲಿಲ್ಲ, ಯಾರೂ ಅವರಿಗಾಗಿ ಕಣ್ಣೀರಿಡುತ್ತಿರಲಿಲ್ಲ.

ಈಗ ಮರಣವು ಒಂದು ಮಹಾನ್ ಆದರ್ಶದ ಕಾರಣಕ್ಕಾಗಿತ್ತು. ಅನಶ್ವರ ವಿಜಯದ ಹಾದಿಯ ಅಪೂರ್ವ ಮೆಟ್ಟಿಲು. ಏಕೈಕ ಅಲ್ಲಾಹನ ಮೇಲೆ ವಿಶ್ವಾಸವಿರಿಸಿದ್ದರಿಂದ ಲಭಿಸುವ ಮರಣವಾದ್ದರಿಂದ ಇದು ಬೇರೆಲ್ಲ ರೀತಿಯ ಮರಣಕ್ಕಿಂತಲೂ ಶ್ರೇಷ್ಠವಾದುದು. ಗುಲಾಮತನದ ನರಕ ಸದೃಶವಾದ ಈ ಬಾಳಿಗಿಂತ ಹುತಾತ್ಮನಾಗುವುದೇ ಉತ್ತಮವೆಂದು ಬಿಲಾಲ್ ಯೋಚಿಸಿದರು.

'ನೀನು ಇಷ್ಟರ ತನಕ ಉತ್ತಮ ಅನುಸರಣೆ ಹಾಗೂ ಶಿಸ್ತು ಪಾಲಿಸುವವನಾಗಿದ್ದೆ. ಪ್ರಾಮಾಣಿಕ ಹಾಗೂ ಸತ್ಯಸಂಧನಾದ್ದರಿಂದಲೇ ನಿನ್ನನ್ನು ಸಿರಿಯಾಕ್ಕೂ ಕಳಿಸಿದೆ. ನಿನಗೆ ಒಳ್ಳೆಯ ಆಹಾರ ಮತ್ತು ಬಟ್ಟೆಯನ್ನು ಒದಗಿಸುತ್ತಿದ್ದೆ. ಆದರೆ ಈಗ ನಿನಗೇನಾಗಿದೆ? ಈ ರೀತಿಯ ಉದ್ಧಟತನ ತೋರಿಸುವುದೇಕೆ?' ಉಮಯ್ಯ ಶಾಂತಸ್ವರದಿಂದ ಹೇಳಿದ.

ಅವೆಲ್ಲವನ್ನೂ ನೀವು ನನಗೆ ಮಾಡಿರುವ ಉಪಕಾರವೆಂದು ಎಣಿಸಬೇಕಾಗಿಲ್ಲ. ಎಲ್ಲವನ್ನೂ ನಿಮ್ಮ ಲಾಭಕ್ಕಾಗಿ ಮಾತ್ರ ಮಾಡಿದ್ದೀರಿ. ನಾನು ನನ್ನನ್ನೇ ಮರೆತು ಕಠಿಣವಾಗಿ ಕೆಲಸ ಮಾಡಲಿ ಎಂಬ ಉದ್ದೇಶದಿಂದ ಮಾತ್ರ. ನನಗೆ ಆಹಾರ ನೀಡದಿದ್ದರೆ ನಾನು ಸಾಯುತ್ತೇನಲ್ಲಾ! ಆಗ ನಿಮ್ಮ ಕೆಲಸ ಮಾಡಲು ಒಬ್ಬ ಕಡಿಮೆಯಾಗುತ್ತಾನೆ. ನಿಮಗೆ ಅದರಿಂದ ನಷ್ಟವಾಗುತ್ತದೆ. ಆದರೆ ಈಗ ಅನ್ನ ಪಾನೀಯವು ನನಗೆ ಸಮಸ್ಯೆಯೇ ಅಲ್ಲ, ದೇವ ಸಂಪ್ರೀತಿ ಮಾತ್ರ ನನಗೆ ಸಾಕು.

'ಮುಹಮ್ಮದ್ ನಿನಗೆ ಹೀಗೆಲ್ಲಾ ಮಾತನಾಡಲು ಕಲಿಸಿದನಲ್ಲಾ? ನಿನ್ನ ಈ ಧಿಕ್ಕಾರ ಎಲ್ಲಿಯವರೆಗೆ ಇರುತ್ತದೆಂದು ನಾನೂ ನೋಡುತ್ತೇನೆ.' ಉಮಯ್ಯ ಕೋಪದಿಂದ ಅರ್ಭಟಿಸಿದ.

'ನನ್ನ ಆತ್ಮವು ಅದರ ಸೃಷ್ಟಿಕರ್ತನನ್ನು ಭೇಟಿಯಾಗುವ ವರೆಗೂ ಇದು ಮುಂದುವರಿಯುವುದು' ಬಿಲಾಲ್(ರ) ಹೇಳಿದರು.

'ಹಾಗಾದರೆ ಆಗಲಿ, ನಾನೂ 'ನೋಡಿಕೊಳ್ಳುತ್ತೇನೆ,' ಎಂದು ಹೇಳಿ ಉಮಯ್ಯ ಚಾಟಿಯಿಂದ ಹೊಡೆಯಲಾರಂಭಿಸಿದ. ಬಿಲಾಲ್ ಎಲ್ಲಾ ನೋವನ್ನು ನುಂಗಿಕೊಂಡರು.'

ಉಮಯ್ಯ ಉಳಿದ ಗುಲಾಮರನ್ನು ಕರೆದ. ಆತನ ಭಯ ಹುಟ್ಟಿಸುವ ಮುಖಭಾವ ಅವರನ್ನು ದಿಗ್ಭ್ರಮೆಗೊಳಿಸಿತು. ಅವರೆಡೆಗೆ ತಿರುಗಿ ಉಮಯ್ಯ ಗರ್ಜಿಸಿದ. 'ಬಿಲಾಲ್‌ನನ್ನು ಸಂಕೋಲೆಯಿಂದ ಬಿಗಿಯಿರಿ.'

ಬಿಲಾಲ್ ತನ್ನ ಕೈಕಾಲುಗಳನ್ನು ತೋರಿಸಿದರು. ನಿಮಿಷದ ಮೊದಲಿನವರೆಗೂ ಜೊತೆಗೆ ಇದ್ದವರು ಬಿಲಾಲ್‌ರ ಶರೀರವನ್ನು ಬಿಗಿದರು. ನಿಜವಾಗಿ ತಾವೇನು ಮಾಡುತ್ತಿದ್ದೇವೆಂದು ಅವರಿಗೇ ತಿಳಿದಿರಲಿಲ್ಲ, ಗುಲಾಮಗಿರಿಯ ಕಪಿಮುಷ್ಟಿಯಲ್ಲಿ ನಲುಗಿದ್ದ ಆ ಬಡಪಾಯಿಗಳು ಅವೆಲ್ಲವನ್ನೂ ಆಲೋಚಿಸುವ ಸಾಮರ್ಥ್ಯವನ್ನೇ ಕಳೆದುಕೊಂಡಿದ್ದರು. ಎಲ್ಲ ಭಾವನೆಗಳು ಮರೆಯಾಗಿ ಅವರು ಸಂವೇದನಾಶೀಲತೆಯನ್ನೇ ಮರೆತಿದ್ದರು. ಯಂತ್ರ ಮಾನವರಂತೆ ಅವರು ಯಜಮಾನನನ್ನು ಅನುಸರಿಸಿದರು. ತಮ್ಮ ಒಡನಾಡಿಯನ್ನೇ ಸಂಕೋಲೆಯಿಂದ ಬಿಗಿದು ಮೂಲೆಗೆ ಸೇರಿಸಿದರು.

ಉಮಯ್ಯನಲ್ಲಿ ದ್ವೇಷಾಗ್ನಿ ಹೊಗೆಯಾಡುತ್ತಿತ್ತು. ಬಿಲಾಲ್‌ನನ್ನು ತರಿದು ಹಾಕಿದರೂ ಮುಗಿಯಲಾರದ ಕೋಪ. ಚಾಟಿಯಿಂದ ಬಾರಿಸಿ ಸುಸ್ತಾದ ಉಮಯ್ಯ ಆ ಧರ್ಮ ದ್ರೋಹಿಯ ದೇಹಕ್ಕೆ ಮುಳ್ಳುಗಳನ್ನು ಚುಚ್ಚಲು ಆಜ್ಞಾಪಿಸಿದ. ಇತರ ಗುಲಾಮರು ಇಡೀ ದೇಹಕ್ಕೆ ಮುಳ್ಳುಗಳಿಂದ ಚುಚ್ಚಿದರು. ದೇಹವಿಡೀ ರಕ್ತದಿಂದ ಮುಳುಗಿದ ಬಿಲಾಲ್‌ರನ್ನು(ರ) ನೋಡಿ ಆತ ಹೇಳಿದ, 'ಅನುಭವಿಸು! ನಿನ್ನ ಧರ್ಮದಿಂದ ಹಿಂದಿರುಗುವುದಿಲ್ಲವೆಂದಾದರೆ ಇದಕ್ಕಿಂತ ಭೀಕರವಾದ ಶಿಕ್ಷೆ ನಿನಗಿದೆ.'

ಬಿಲಾಲ್(ರ) ಮಂದಹಾಸ ಬೀರಿದರು. ಸುಂದರ ಮುಗುಳ್ನಗೆ. ದೃಢವಿಶ್ವಾಸಕ್ಕೆ ಎಂತಹ ನೋವನ್ನೂ ಮರೆಸುವ ಸಾಮರ್ಥ್ಯವಿದೆ ಯೆಂಬುದನ್ನು ಅವರ ತುಟಿಗಳು ಸಾರುತ್ತಿದ್ದವು.

ಬಿಲಾಲ್‌ರನ್ನು(ರ) ಹೀಗೆ ಬೆದರಿಸಿ ತನ್ನ ಕಡೆಗೆ ಸೆಳೆಯಬಹುದೆಂದು ಉಮಯ್ಯ ಭಾವಿಸಿದ್ದ, ಆದರೆ ಬಿಲಾಲ್ ಅನಶ್ವರತೆಯೆಡೆಗೆ ಸಾಗುತ್ತಿದ್ದರು. ತನ್ನ ರಕ್ತದ ಹನಿಗಳಿಂದ ಇತಿಹಾಸವನ್ನು ನಿರ್ಮಿಸುತ್ತಿದ್ದರು. ಎಲ್ಲಾ ಕಾಲದ ಮರ್ದಿತರಿಗೆ ಧೈರ್ಯ ಸ್ಥೈರ್ಯವನ್ನು ನೀಡಿ, ಮಹೋನ್ನತವಾದ ವಿಜಯದೆಡೆಗೆ ಸಾಗುವ ಆಶಾಕೇಂದ್ರವಾಗಿ ಮಾರ್ಪಟ್ಟಂತಹ ಚರಿತ್ರೆಯಾಗಿತ್ತು ಅದು.

# ಏಕನು! ಏಕನು!

'ಏಕನು! ಏಕನು!' ಬಿಲಾಲ್‌ರ ತುಟಿಗಳು ಉಸುರಿದವು. ಅದು ನೋಡುವವರಲ್ಲಿ ಆಕರ್ಷಣೆ ಮೂಡಿಸದ ಕಪ್ಪಾದ ತುಟಿಗಳಾಗಿದ್ದವು.

ಮೇಲೆ ಪ್ರಜ್ವಲಿಸುತ್ತಿರುವ ಮಧ್ಯಾಹ್ನದ ಸೂರ್ಯ. ಕೆಳಗೆ ಕಾದು ಕೆಂಪಾದ ಮರಳ ಕಣಗಳು. ಮರುಭೂಮಿಯಲ್ಲಿ ಜೋರಾಗಿ ಬೀಸುತ್ತಿರುವ ಬಿಸಿಗಾಳಿ. ಶರೀರವಿಡೀ ಚಾಟಿಯೇಟಿನಿಂದಾದ ಗಾಯಗಳು. ಸ್ವಲ್ಪವೂ ಸರಿಯಲು ಸಾಧ್ಯವಾಗದಂತೆ ಎದೆಯ ಮೇಲೆ ದೊಡ್ಡ ಕಪ್ಪು ಕಲ್ಲು. ಬಿಲಾಲ್‌ರ ದೇಹ ಬೇಯುತ್ತಿತ್ತು. ಮಾಂಸಖಂಡಗಳೂ ರೋಮವೂ ಕರಟುತ್ತಿವೆ! ಕುರೈಶ್ ಪ್ರಮುಖರು ಸುತ್ತಲೂ ನಿಂತಿದ್ದಾರೆ. ಚಪ್ಪಾಳೆ ತಟ್ಟಿ ಅಟ್ಟಹಾಸದಿಂದ ಕೇಕೆ ಹಾಕಿ ನಗುತ್ತಿದ್ದಾರೆ. ಮಕ್ಕಳು ಕೇಕೆ ಹಾಕಿ ಕುಣಿಯುತ್ತಲೂ ಕಲ್ಲೆಸೆಯುತ್ತಲೂ ಇದ್ದಾರೆ.

ಹೊರಗೆ ಭಯಾನಕವಾದ ತಾಪವಿದ್ದರೂ ಬಿಲಾಲ್‌ರ(ರ) ಅಂತರಂಗ ತಣ್ಣಗೆ, ಸಮಾಧಾನದಿಂದಿತ್ತು. ನೋವು ಸಹಿಸಲಸಾಧ್ಯವಾದಾಗ ಅವರು ಹೇಳಿದರು: 'ದೇವನು ಒಬ್ಬನು! ಅಲ್ಲಾಹು ಅಹದ್!' ಈ ಮಂತ್ರವು ಅವರಿಗೆ ಅಭೌತಿಕವಾದ ಒಂದು ಸಮಾಧಾನವನ್ನು ನೀಡಿತು.

ಬಿಲಾಲ್‌ರಿಗೆ ಉಸಿರಾಡಲೂ ಕಷ್ಟವಾಗುತ್ತಿತ್ತು. ಎದೆಯಲ್ಲಿನ ಕಪ್ಪು ಕಲ್ಲಿನ ಭಾರ ಅಸಹನೀಯವಾಗಿತ್ತು. ಮೂರ್‍ನಾಲ್ಕು ಜನ ಹೊತ್ತು ತಂದು ಅದನ್ನು ಅವರ ಮೇಲಿರಿಸಿದ್ದರು. ಬಿಲಾಲ್ ನರಳುವಾಗ, ಚಡಪಡಿಸುವಾಗ ಉಮಯ್ಯ ಹಾಗೂ ಸಂಗಡಿಗರು ಕೇಕೆ ಹಾಕುತ್ತಿದ್ದರು.

ಕುರೈಶ್ ಪ್ರಮುಖರು ಇನ್ನೊಂದು ರೀತಿಯ ಕೊನೆಯ ಶಿಕ್ಷಾ ವಿಧಾನವನ್ನು ಪರೀಕ್ಷಿಸ ಬಯಸಿದ್ದರು. ಈ ವರೆಗೆ ಎಲ್ಲಾ ರೀತಿಯ ಶಿಕ್ಷೆ ನೀಡಿಯೂ ಅವರೇ ಸೋತು ಹೋಗಿದ್ದರು. ಮುಹಮ್ಮದರನ್ನು ನಿಷೇಧಿಸುವ ಒಂದು ವಾಕ್ಯ– ಅಥವಾ ಹಿಂದಿನ ಧರ್ಮಕ್ಕೆ ಮರಳಿದ್ದೇನೆಂಬ ಒಂದು ಶಬ್ದ, ಇದು ಮಾತ್ರ ಅವರು ಬಿಲಾಲ್‌ರಿಂದ ಬಯಸಿದ್ದರು. ಆದರೆ ಆ ಇತಿಯೋಪಿಯಾದ ಗುಲಾಮನ ತುಟಿಗಳು ಅಲುಗಾಡಿದಾಗ ಹೊರಬರುತ್ತಿದ್ದ ಶಬ್ದ ಒಂದೇ ಆಗಿತ್ತು, 'ಏಕನು! ಏಕನು!'

ಕೊನೆಗೆ ಕೊರಳಿಗೆ ಹಗ್ಗ ಕಟ್ಟಿ ಮಕ್ಕಾದ ಮರುಭೂಮಿಯಲ್ಲಿ ಎಳೆದಾಡಲು ಪುಂಡ ಮಕ್ಕಳಿಗೆ ಒಪ್ಪಿಸಲಾಯಿತು. ಅವರು ನಾಯಿಯ ಶವವನ್ನು ಪಾಳು ಬಾವಿಗೆ ಹಾಕಲು ಒಯ್ಯುವಂತೆ ಅಡ್ಡಾದಿಡ್ಡಿಯಾಗಿ ಎಳೆದಾಡಿದರು.

ನಡು ಮಧ್ಯಾಹ್ನ ಸುಡು ಮರಳಲ್ಲಿ ಎಳೆದಾಡುತ್ತಿರುವಾಗ ಉಮಯ್ಯ ಹೇಳಿದ;

'ಹೊಸ ಧರ್ಮದ ವಿರುದ್ಧ ಒಂದೇ ಒಂದು ಮಾತು ಹೇಳಿದರೆ ಸಾಕು. ನಿನಗೆ ಈ ಎಲ್ಲಾ ಶಿಕ್ಷೆಯಿಂದ ಮುಕ್ತಿ ದೊರೆಯುತ್ತದೆ.'

'ಏಕನು! ಏಕನು!' ಉಮಯ್ಯನ ಮನಕ್ಕೆ ಬೆಂಕಿ ಹಚ್ಚಿದಂತೆ ಬಿಲಾಲ್‌ರ ತುಟಿಗಳು ಚಲಿಸಿದವು.

'ಲಾತ; ಉಝ್ಝಾ! ಎಂದು ಒಂದು ಬಾರಿ ಹೇಳಿದರೇನು? ನಿನಗೆ ಶಿಕ್ಷೆ ನೀಡಿ ನಾವೇ ಸುಸ್ತಾದೆವಲ್ಲಾ!

'ಅಹದ್! ಅಹದ್!'

'ನಿಲ್ಲಿಸು ನಿನ್ನ ಒದರುವಿಕೆ!' ಎಂದು ಹೇಳಿ ಉಮಯ್ಯ ಬಿಲಾಲ್‌ರ ಕುತ್ತಿಗೆಯನ್ನು ಒತ್ತಿ ಹಿಡಿದ.

ಆಗಲೂ ಕೂಡಾ ಆ ಧೀರ ಯೋಧ ಅದನ್ನೇ ಪುನರಾವರ್ತಿಸುತ್ತಿದ್ದರು.

'ಇಲ್ಲ, ನಿನ್ನನ್ನು ನಾನು ಕೊಲ್ಲುವುದಿಲ್ಲ, ನೀನು ಸತ್ತರೆ ನಿನಗೆ ಚಿತ್ರ ಹಿಂಸೆ ನೀಡಲು ನನಗೆ ಅವಕಾಶವಿರದು. ನೀನೂ ಕೂಡಾ ಅದರಿಂದ ಪಾರಾಗುವಿ.' ಉಮಯ್ಯ ಹಿಡಿತ ಸಡಿಲಿಸಿದ.

ಮರ್ದನ ಸಹಿಸಲಾಗದೆ ವಿವಶನಾಗಿದ್ದ ಬಿಲಾಲ್‌ರನ್ನು ನೋಡಿ ಅಬೂಜಹಲ್ ಹೇಳಿದ, 'ನೀನು ಆ ಧರ್ಮದಿಂದ ಮರಳಿ ಬಾ. ನಿನಗೆ ಈ ಹಿಂಸೆಯಿಂದ ಪಾರಾಗಬಹುದು.'

'ಅಲ್ಲಾಹು ಅಹದ್! ಅಲ್ಲಾಹು ಅಹದ್!' ಬಿಲಾಲ್‌ರ ನಾಲಗೆ ಉಸುರಿತು.

'ಮುಹಮ್ಮದನನ್ನು ನಿಂದಿಸಿ ಏನಾದರೂ ಒಂದು ವಾಕ್ಯ ಹೇಳು, ಅಬೂಲಹಬ್ ಅನುನಯದಿಂದ ಹೇಳಿದ.

'ಏಕನು! ಏಕನು! ಬಿಲಾಲ್ ತಗ್ಗಿದ ಧ್ವನಿಯಲ್ಲಿ ಹೇಳಿದರು. ಅದು ಶತ್ರುಗಳ ಅಂತರಂಗವನ್ನು ಕೆಣಕಿತು. ಅವರು ಗರ್ಜಿಸಿದರು.'

'ಸುಮ್ಮನಿರು! ನಿನ್ನ ಈ ಅಹದ್!'

'ಹಾಗೆ ಹೇಳದಿರಲು ನನ್ನಿಂದ ಸಾಧ್ಯವಿಲ್ಲ, ನನ್ನನ್ನು ಅವನೇ ಸೃಷ್ಟಿಸಿದ್ದಾನೆ. ನನ್ನ ಸಂರಕ್ಷಕ, ಒಡೆಯ ಅವನೊಬ್ಬನೆ!' ಬಿಲಾಲ್(ರ) ಹೇಳಿದರು.

ಒಮ್ಮೆ ಬಿಲಾಲ್‌ರನ್ನು ನಿರ್ದಯವಾಗಿ ಮರ್ದಿಸುತ್ತಿದ್ದ ಉಮಯ್ಯನನ್ನು ನೋಡಿ ವರಕ ಬಿನ್ ನೌಫಲ್ ಹೇಳಿದರು; ನೀವು ಅವನನ್ನು ಕೊಂದರೂ ಅವನು ತನ್ನ ವಿಶ್ವಾಸವನ್ನು ಬದಲಿಸಲಾರ. ಮತ್ತೇಕೆ ಆ ಬಡಪಾಯಿಯನ್ನು ಹಿಂಸಿಸಿ ಪಾಪ ಕಟ್ಟಿಕೊಳ್ಳುತ್ತೀರಿ? ನಿನ್ನ

ಹಿಂಸೆಯಿಂದ ಆತ ಹತನಾದರೆ ಅವನ ಸಮಾಧಿ ಸ್ಥಳವನ್ನು ನಾನು ಸಂದರ್ಶನ ಸ್ಥಳವಾಗಿ ಮಾರ್ಪಡಿಸುತ್ತೇನೆ. ಜನಸಮೂಹವು ಅನುಗ್ರಹ ಅರಸುತ್ತಾ ಅಲ್ಲಿಗೆ ಬರುತ್ತದೆ.

ಆದರೆ ಉಮಯ್ಯ ತನ್ನ ಚಿತ್ರಹಿಂಸೆಯನ್ನು ಮುಂದುವರಿಸಿದ. ಹಿಂಸೆ ನಿರಂತರವಾದಾಗ ಓರ್ವರು ಅನುಕಂಪದಿಂದ ಕೇಳಿದರು.

'ಬಿಲಾಲ್! ನಿನಗೆ ಯಜಮಾನನ ಇಂಗಿತದಂತೆ ವರ್ತಿಸಿದರೇನು? ಸುಮ್ಮನೆ ಇಂತಹ ದೌರ್ಜನ್ಯಗಳನ್ನೇಕೆ ಅನುಭವಿಸುವಿ?'

'ನಾವು ಸಾಧಾರಣ ಒಂದು ಪಾತ್ರೆಯನ್ನು ಖರೀದಿಸುವಾಗಲೂ ಹಲವು ಬಾರಿ ಆಲೋಚಿಸಿಯೇ ಖರೀದಿಸುತ್ತೇವೆ. ದೇವನು ನನ್ನ ವಿಶ್ವಾಸವನ್ನು ಪರೀಕ್ಷಿಸುತ್ತಿದ್ದಾನೆ. ನನ್ನ ದೃಢ ನಿರ್ಧಾರವನ್ನು ಅಳೆಯುತ್ತಿದ್ದಾನೆ!' ಬಿಲಾಲ್ ತಾನು ಅನುಭವಿಸುತ್ತಿದ್ದ ನೋವಿನ ಮರ್ಮವನ್ನು ವ್ಯಕ್ತಪಡಿಸಿದರು.

ಹೊಸ ಹೊಸ ಶಿಕ್ಷೆಯನ್ನು ಪ್ರಯೋಗಿಸುವಾಗಲೆಲ್ಲಾ ಉಮಯ್ಯ, ಬಿಲಾಲ್(ರ) ಮಣಿಯಬಹುದೆಂದು ಭಾವಿಸಿದ. ಬಿಲಾಲ್ ಈಗ ನನ್ನ ಧರ್ಮಕ್ಕೆ ಮರಳಬಹುದು ಎಂಬ ಆಶಾವಾದದಲ್ಲಿದ್ದ. ಆದರೆ ಬಿಲಾಲ್‌ರದ್ದು ಒಂದೇ ಮಾತು. 'ಅಹದ್, ಅಹದ್!'

ಉಮಯ್ಯ ಹಾಗೂ ಸಂಗಡಿಗರು ನಿರಾಶರಾಗಿ ಮುಂದೇನು ಮಾಡುವುದೆಂದು ಸಮಾಲೋಚನೆ ನಡೆಸುತ್ತಿದ್ದರು.

ಉಮಯ್ಯ ಹೇಳಿದ, 'ನನಗೆ ಸಾಕಾಯಿತು! ನಾನಿನ್ನು ಅವನನ್ನು ಕೊಂದೇ ಬಿಡುತ್ತೇನೆ. ಒಂದು ಪೀಡೆ ತೊಲಗಲಿ.'

'ಇದೆಂತಹ ಮೂರ್ಖತನದ ಮಾತುಗಳು? ಕೊಂದರೆ ನಾವು ಸೋಲೊಪ್ಪಿಕೊಂಡಂತಾಗುವುದಿಲ್ಲವೇ? ಜನರಿಗೆ ನಮ್ಮ ದೌರ್ಬಲ್ಯ ಮನವರಿಕೆಯಾಗಬಹುದಲ್ಲವೆ?' ಅಬೂಜಹಲ್ ಕೇಳಿದ.

'ಇನ್ನೇನು ಮಾಡುವುದು? ಅವನಿಗೆ ಶಿಕ್ಷೆ ನೀಡಿ ನಾನೇ ಸೋತು ಹೋದೆ.'

'ಹಾಗೆ ಹೇಳಿದರೆ ಆಗದು. ಆತ ಮುಹಮ್ಮದ್‌ನ ಧರ್ಮವನ್ನು ತ್ಯಜಿಸುವ ವರೆಗೆ ಇದು ಮುಂದುವರಿಯಬೇಕು.'

'ನಾನು ಶಕ್ತಿ ಮೀರಿ ಪ್ರಯತ್ನಿಸಿದೆ. ಇಂತಹ ಕ್ರೂರ ಹಿಂಸೆಯನ್ನು ಸಹಿಸುವ ವ್ಯಕ್ತಿಯನ್ನು ನಾನು ಇದುವರೆಗೆ ಕಂಡಿಲ್ಲ.' ಉಮಯ್ಯ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿದ.

'ನಿರಾಶನಾಗಬೇಡ. ಇನ್ನೊಂದು ಶಿಕ್ಷಾ ವಿಧಾನವಿದೆ. ಅದನ್ನು ಪ್ರಯೋಗಿಸೋಣ. ಅದನ್ನು ಸಹಿಸಲು ಅವನಿಗೆ ಸಾಧ್ಯವಾಗಲಾರದು. ಅಬೂಜಹಲ್ ಸಮಾಧಾನಪಡಿಸಿದ. ಹೀಗೆ ನಡು ಮಧ್ಯಾಹ್ನ ಗಂಟಲಿಗೆ ಹನಿ ನೀರು ನೀಡದೆ ಕಾದ ಮರಳಲ್ಲಿ ಕೈಕಾಲು ಕಟ್ಟಿ

ಮಲಗಿಸುವುದು. ಅಲುಗಾಡದಿರಲು ಎದೆಯ ಮೇಲೆ ಭಾರವಾದ ಕಲ್ಲನ್ನಿರಿಸುವುದು. ಬಳಿಕ ಕೊರಳಿಗೆ ಹಗ್ಗ ಕಟ್ಟಿ ಎಳೆದಾಡುವುದು ಎಂದು ತೀರ್ಮಾನಿಸಲಾಯಿತು.

ಬಿಲಾಲ್‌ರನ್ನು ಆ ಭೀಕರ ಶಿಕ್ಷೆಗೂ ಗುರಿಪಡಿಸಲಾಯಿತು. ಬಿಲಾಲ್‌ರ ದೇಹವಿಡೀ ಸುಟ್ಟ ಗಾಯಗಳಾದವು. ಮುಖ ಹಾಗೂ ಕಣ್ಣುಗಳಲ್ಲಿ ಮರಳು ತುಂಬಿಕೊಂಡಿತು. ಸಂಕೋಲೆಯಿಂದ ಬಂಧಿಸಿದ್ದರಿಂದ ಕಲ್ಲನ್ನು ಸರಿಸಲಾಗದೆ ಚಡಪಡಿಸಿದರು. ನೋವು ತಾಳಲಾರದೆ ವಿಲವಿಲನೆ ಒದ್ದಾಡುತ್ತಿದ್ದ ಬಿಲಾಲ್‌ರ ಬಳಿ ಹೋಗಿ ಅಬೂಜಹಲ್ ಹೇಳಿದ: 'ಮುಹಮ್ಮದ್‌ನನ್ನು ನಿಂದಿಸಲು ನಿನಗಿನ್ನೂ ಸಮಯವಾಗಲಿಲ್ಲವೇ?'

'ಅಲ್ಲಾಹು ಅಹದ್! ಅಹದ್!' ಬಿಲಾಲ್‌ರ ಮೆಲುದನಿಯ ಉತ್ತರ.

ಅಬೂಜಹಲ್ ಹಾಗೂ ಸಂಗಾತಿಗಳು ನಿರಾಶರಾಗಿ ತಲೆ ತಗ್ಗಿಸಿದರು. ಉಮಯ್ಯ ತನ್ನ ಅಭಿಪ್ರಾಯವನ್ನು ಪುನರಾವರ್ತಿಸಿದ. 'ಈತ ಎಂತಹ ಕ್ರೂರ ಚಿತ್ರಹಿಂಸೆಗೂ ಬಗ್ಗುವುದಿಲ್ಲ, ಆದ್ದರಿಂದ ಈತನ ಕಥೆ ಮುಗಿಸುವುದೇ ಒಳ್ಳೆಯದು.'

'ಹೌದು, ಏನು ಮಾಡಬೇಕೆಂದು ನನಗೂ ತೋಚುತ್ತಿಲ್ಲ, ಇದೆಂತಹ ಸಮಸ್ಯೆ!' ಅಬೂಜಹಲ್ ತೀವ್ರ ನಿರಾಶೆ ವ್ಯಕ್ತಪಡಿಸಿದ. ಕ್ರೂರ ಮರ್ದನ ಹಾಗೂ ಚಿತ್ರಹಿಂಸೆಯ ಬಲಿಪಶು ಬಿಲಾಲ್ ಆಗಿದ್ದರೂ ಆತನನ್ನು ಮಣಿಸಲಾಗದೆ ಯಜಮಾನರು ಕಂಗಾಲಾದರು.

ಮರಣವು ಸನ್ನಿಹಿತವಾಗಿದ್ದರೂ ಬಿಲಾಲ್‌ರ ವಿಶ್ವಾಸ ಸ್ವಲ್ಪವೂ ಚಂಚಲವಾಗಲಿಲ್ಲ. ಯಜಮಾನನಿಗೆ ಯಾವ ನಿಮಿಷದಲ್ಲೂ ಆತನ ಕಥೆ ಮುಗಿಸಬಹುದಿತ್ತು. ಅದನ್ನು ಪ್ರಶ್ನಿಸುವವರು, ಹೇಳುವವರು, ಯಾರೂ ಇರಲಿಲ್ಲ. ಆದರೂ ಬಿಲಾಲ್ ತನ್ನ ಯಜಮಾನನ ವಿಶ್ವಾಸವನ್ನು ಪ್ರಶ್ನಿಸಿದರು. ಆತನ ಆಚಾರ ಸಂಪ್ರದಾಯವನ್ನು ನಿರಾಕರಿಸಿದರು. ಎದುರಾದ ಕ್ರೂರ ದೌರ್ಜನ್ಯಗಳನ್ನು ಆತ್ಮಸ್ಥೈರ್ಯದಿಂದ ಎದುರಿಸಿದರು. ಅವರ ಅಸಾಮಾನ್ಯವಾದ ದೃಢವಿಶ್ವಾಸ ಕುರೈಶ್ ಪ್ರಮುಖರನ್ನು ಕಂಗೆಡಿಸಿತ್ತು.

# ಬಿಡುಗಡೆ

'ದೇವನನ್ನು ಭಯಪಡಿರಿ, ಆ ಬಡಪಾಯಿಯನ್ನು ಅವನ ಪಾಡಿಗೆ ಬಿಟ್ಟುಬಿಡಿರಿ. ಎಷ್ಟು ಸಮಯದಿಂದ ಅವನನ್ನು ನೀವು ಮರ್ದಿಸುತ್ತಿದ್ದೀರಿ? ಇನ್ನಾದರೂ ನಿಲ್ಲಿಸಬಾರದೆ?' ಒಂದು ಬಾರಿ ಅಬೂಬಕರ್ ಕೇಳಿದರು. ಅವರಿಗೆ ಮೊದಲೇ ಈ ವಿಷಯ ತಿಳಿದಿತ್ತು. ಮರ್ದನದ ತೀವ್ರತೆಯನ್ನು ಅರಿತಿದ್ದರು. ಇದುವರೆಗೆ ಕಂಡಿರದ, ಊಹಿಸ್ಸಿರದ ಕಿರಾತವಾದ ಹಿಂಸೆಗೆ ಗುರಿಯಾದ ಬಿಲಾಲ್‌ರ ವೇದನೆಯಿಂದ ನರಳುವ ಚಿತ್ರ ಅವರ ಮನವನ್ನು ಘಾಸಿಗೊಳಿಸಿತ್ತು. ಪ್ರತೀಕಾರವೆಸಗಲು ಬೇಕಾದ ಜನ ಹಾಗೂ ಆಯುಧ ಬಲ ಅವರಲ್ಲಿರಲಿಲ್ಲ, ಪ್ರತಿಭಟಿಸಲು ಕೂಡಾ ಆಗುತ್ತಿಲ್ಲ, ದೊಡ್ಡ ಮೊತ್ತಕ್ಕೆ ಆ ಗುಲಾಮನನ್ನು ತಮಗೆ ನೀಡ ಬಹುದೆಂಬ ನಿರೀಕ್ಷೆಯಿಲ್ಲ, ಪ್ರವಾದಿ ಮುಹಮ್ಮದ್(ಸ) ಹಾಗೂ ಬೆರಳೆಣಿಕೆಯ ಅನುಯಾಯಿಗಳು ಬಿಲಾಲ್‌ರ ದಯನೀಯಾವಸ್ಥೆಗೆ ಮರುಗುತ್ತಿದ್ದರು. ಹಲವು ಬಾರಿ ಅವರ ಕಣ್ಣುಗಳು ತಮ್ಮ ಅಸಹಾಯಕತೆಗೆ ಕೊಳಗಳಾಗುತ್ತಿದ್ದವು.

'ಈತನನ್ನು ಬಿಟ್ಟು ಬಿಡುವುದರಿಂದ ನಿಮಗೇನು ಲಾಭವಿದೆ? ಇವನು ನನ್ನ ಗುಲಾಮ. ಅವನನ್ನು ನನ್ನಿಚ್ಛೆಯಂತೆ ಏನು ಬೇಕಾದರೂ ಮಾಡುತ್ತೇನೆ' ಉಮಯ್ಯ ಹೇಳಿದ.

'ಆದರೂ ದೇವರ ಬಗ್ಗೆ ಭಯವಿಲ್ಲವೇ? ಪರಲೋಕದಲ್ಲಿ ಶಿಕ್ಷೆಯ ಹೆದರಿಕೆಯೂ ಇಲ್ಲವೇ?' ಅಬೂಬಕರ್ ಪ್ರಶ್ನಿಸಿದರು.

'ಎಂತಹ ಪರಲೋಕ? ಅದು ಎಲ್ಲಿದೆ? ಅದನ್ನು ಕಾಯಲು ನನಗಿಲ್ಲಿ ಯಾವ ಕೊರತೆಯಿದೆ. ಸರ್ವಸುಖ, ಐಶಾರಾಮ, ಸ್ವರ್ಗಸುಖ ಎಲ್ಲವೂ ನನಗೆ ಈ ಭೂಮಿಯಲ್ಲೇ ಇದೆ.' ಉಮಯ್ಯ ಹೇಳಿದ.

'ದೇವನನ್ನು ಭಯಪಡು. ಅದುವೇ ನಿನಗೆ ಉತ್ತಮ. ಆ ದುರ್ಬಲನನ್ನು ಹೀಗೆ ದಯವಿಟ್ಟು ಶಿಕ್ಷಿಸಬೇಡ' ಅಬೂಬಕರ್ ವಿನಂತಿಸಿದರು.

'ಸಾಕು ನಿಲ್ಲಿಸು. ಅಬೂ ಕುಹಾಫರ ಪುತ್ರನೇ, ಅವನನ್ನು ದಾರಿ ತಪ್ಪಿಸಿದವರು ನೀವೇ ಅಲ್ಲವೇ? ಆದ್ದರಿಂದ ಆತನ ಇಂದಿನ ದುರ್ಗತಿಗೆ ನೀವೇ ಕಾರಣ.

'ನಾನು ಅವನಿಗೆ ದಾರಿತಪ್ಪಿಸಿಲ್ಲ, ಸನ್ಮಾರ್ಗ ತೋರಿಸಿದ್ದೇನೆ.'

'ನಿನ್ನ ಮಾತು ನಿಲ್ಲಿಸು. ನಾವು ಏನು ಬೇಕಾದರೂ ಮಾಡಿಕೊಳ್ಳುತ್ತೇವೆ. ನಮ್ಮನ್ನು ನಮ್ಮ ಪಾಡಿಗೆ ಬಿಡು' ಉಮಯ್ಯ ಹೇಳಿದ.

'ಬಿಲಾಲ್‌ರನ್ನು ಬಿಡುಗಡೆಗೊಳಿಸುವ ವರೆಗೂ ನಾನು ಸುಮ್ಮನಿರಲು ಸಾಧ್ಯವಿಲ್ಲ.'

'ನಮ್ಮ ಧರ್ಮಕ್ಕೆ ಮರಳುವ ವರೆಗೆ ಅಥವಾ ಸಾಯುವ ವರೆಗೂ ನಾನವನನ್ನು ಶಿಕ್ಷಿಸುತ್ತೇನೆ.' ಉಮಯ್ಯ ಬಾಯಲ್ಲಿ ಹಾಗೆ ಹೇಳಿದರೂ ಮನಸ್ಸು ಬೇರೆಯೇ ರೀತಿ ಯೋಚಿಸುತ್ತಿತ್ತು.

'ಬಿಲಾಲ್ ಇನ್ನು ಖಂಡಿತವಾಗಿಯೂ ನಮ್ಮ ಧರ್ಮಕ್ಕೆ ಮರಳಲಾರ. ಲಾತ, ಉಝ್ಝಾರನ್ನು ದೇವರೆಂದು ಅಂಗೀಕರಿಸಲಾರ. ಮುಹಮ್ಮದ್‌ರ ಧರ್ಮ ತ್ಯಜಿಸಲಾರ. ಓರ್ವ ಮಾನವನಿಗೆ ಸಾಧ್ಯವಿರುವ ಎಲ್ಲಾ ಶಿಕ್ಷಾ ವಿಧಾನವನ್ನು ಪರೀಕ್ಷಿಸಿಯಾಗಿದೆ. ಎಲ್ಲವೂ ಪರಾಜಯ ಹೊಂದಿವೆ. ಬಿಲಾಲ್ ತನ್ನ ದೇವನಿಗಲ್ಲದೆ ಇನ್ಯಾರಿಗೂ ಭಯಪಡುವವನ. ಅಲ್ಲಾಹನು ಒಬ್ಬನೇ ಎಂಬ ಘೋಷಣೆಯಲ್ಲದೆ ಬೇರೇನೂ ಅವನ ನಾಲಗೆಯಿಂದ ಹೊರ ಬರುವುದಿಲ್ಲ. ಏನೇ ಪ್ರಯತ್ನಪಟ್ಟರೂ ಬದಲಾವಣೆಯಾಗಬಹುದೆಂಬ ನಿರೀಕ್ಷೆ ಉಮಯ್ಯನಿಗೆ ಇರಲಿಲ್ಲ. ಆದ್ದರಿಂದ ಕೊಲ್ಲುವುದೊಂದೇ ಇನ್ನು ಉಳಿದಿರುವ ದಾರಿ. ಕೊಂದರೂ ಕೂಡಾ ಅದು ನನಗೆ ಮತ್ತು ಕುರೈಶ್ ಪ್ರಮುಖರಿಗೆ ಅಪಮಾನವೆಂದೂ ಅವನಿಗೆ ತಿಳಿದಿದೆ. ಮಾತ್ರವಲ್ಲ ನನಗೆ ಈತನಂತಹ ಬಲಾಢ್ಯ ಗುಲಾಮನನ್ನು ಕಳೆದುಕೊಳ್ಳುವುದರಿಂದ ನಷ್ಟವಾಗುತ್ತದೆ.'

'ಉಮಯ್ಯಾ!, ಆತ ಖಂಡಿತವಾಗಿಯೂ ನಿಮ್ಮ ಧರ್ಮಕ್ಕೆ ಮರಳಲಾರ. ಬೆಳಕು ಗೋಚರಿಸಿದ ಬಳಿಕ ಯಾರಾದರೂ ಅಂಧಕಾರಕ್ಕೆ ಮರಳಬಹುದೇ?' ಅಬೂಬಕರ್ ನೆನಪಿಸಿದರು.

'ನೀವು ಅವನ ಪರವಾಗಿ ವಾದಿಸಲು ಇಲ್ಲಿಗೆ ಬಂದಿದ್ದೀರಾ? ಅಥವಾ ನಮ್ಮ ಧರ್ಮವನ್ನು ಆಕ್ಷೇಪಿಸಿ, ನಿಂದಿಸಲು ಬಂದದ್ದಾ? ಉಮಯ್ಯ ಕೋಪದಿಂದ ಕೇಳಿದ.

'ಸಾಯುವ ವರೆಗೂ ಅವನು ಈ ಧರ್ಮದಲ್ಲೇ ದೃಢವಾಗಿರುತ್ತಾನೆ ಎಂಬ ಸತ್ಯವನ್ನು ನಿಮಗೆ ತಿಳಿಸಲು ಬಂದಿದ್ದೇನೆ.'

'ನಮ್ಮ ದೇವರನ್ನು ಧಿಕ್ಕರಿಸಿ, ಮಕ್ಕಳನ್ನು ದಾರಿ ತಪ್ಪಿಸಲು ಅವನಿಗೆ ಆಹಾರ ಪಾನೀಯಗಳನ್ನು ನೀಡಿ ಪೋಷಿಸಬೇಕೆ?'

'ಹಾಗಾದರೆ ನೀವವನನ್ನು ಮಾರಾಟ ಮಾಡುವಿರಾ?' ಸಂದರ್ಭ ನೋಡಿ ಅಬೂಬಕರ್ ಪ್ರಶ್ನಿಸಿದರು.

'ಗುಲಾಮನಿಗೆ ಬುದ್ಧಿ ಕಲಿಸುತ್ತಿರುವಾಗ ಮಾರಾಟ ಮಾಡುವುದು ನಮ್ಮ ಸಂಪ್ರದಾಯವಲ್ಲ.'

'ಬಿಲಾಲ್‌ನ ಸಾವು ಸನ್ನಿಹಿತವಾಗಿದೆ. ಆದರೂ ಅಬೂಬಕರ್ ಆತನನ್ನು ಬೆಲೆ ನೀಡಿ ಖರೀದಿಸುವರೆಂದಾದರೆ ನಾವೇಕೆ ತಡೆದಿರಿಸಬೇಕು?' ಉಮಯ್ಯ ಮಾರಾಟ ಮಾಡುವ ಇರಾದೆ ವ್ಯಕ್ತಪಡಿಸಿದ.

'ಎಷ್ಟು ಮೊತ್ತ ನೀಡಬೇಕು?' ಅಬೂಬಕರ್ ಪ್ರಶ್ನಿಸಿದರು.

'ನೀವೆಷ್ಟು ನೀಡುತ್ತೀರಿ'

'ನೀವು ಹೇಳುವ ಬೆಲೆಯನ್ನು ನೀಡಲು ಸಿದ್ಧನಿದ್ದೇನೆ.'

'ಐದು ಊಕಿಯ ನೀಡಿದರೆ ನಾನವನನ್ನು ನಿಮಗೆ ಒಪ್ಪಿಸುತ್ತೇನೆ.'

'ಹಾಗಾದರೆ ನಾನವನನ್ನು ಖರೀದಿಸಿದ್ದೇನೆ' ಎಂದು ಹೇಳಿ ಅಬೂಬಕರ್ ನಿಗದಿಪಡಿಸಿದ ಮೊತ್ತವನ್ನು ಉಮಯ್ಯನಿಗೆ ನೀಡಿದರು. ಹಣವನ್ನು ನೀಡಿದ ತಕ್ಷಣ ಅಬೂಬಕರ್ ಹೀಗೆ ಘೋಷಿಸಿದರು. ಬಿಲಾಲ್ ನೀವು ಸ್ವತಂತ್ರರಾಗಿದ್ದೀರಿ. ನಿಮ್ಮನ್ನು ನಾನು ಸ್ವತಂತ್ರಗೊಳಿಸಿದ್ದೇನೆ. ಬಿಲಾಲ್‌ರಿಗೆ ತೊಡಿಸಿದ್ದ-ಸಂಕೋಲೆಗಳನ್ನು ಕಳಚಲಾಯಿತು. ಅಬೂಬಕರ್ ಜರ್ಝರಿತ ರಾಗಿದ್ದ ಬಿಲಾಲ್‌ರನ್ನು ಕೈ ಹಿಡಿದು ಎಬ್ಬಿಸಿ, ಆಸರೆ ನೀಡಿ ತಮ್ಮ ಮನೆಗೆ ಕರೆ ತಂದರು.

'ಒಂದು ಊಕಿಯ ನೀಡಿದರೂ ನಾನವನನ್ನು ಒಪ್ಪಿಸುತ್ತಿದ್ದೆ, ಅನಗತ್ಯವಾಗಿ ಒಂದು ಶವಕ್ಕೆ 5 ಊಕಿಯ ನೀಡಿದಿರಿ!' ಉಮಯ್ಯ ವ್ಯಂಗ್ಯವಾಗಿ ನಗುತ್ತಾ ಹೇಳಿದ.

'ನೂರು ಊಕಿಯಾವನ್ನು ನೀಡದಿದ್ದರೆ ಅವನನ್ನೊಪ್ಪಿಸುವುದಿಲ್ಲವೆಂದು ನೀವು ಹೇಳಿದ್ದರೂ ಅಷ್ಟು ಹಣವನ್ನು ನಾನು ಸಂತೋಷದಿಂದ ನೀಡುತ್ತಿದ್ದೆ.' ಅಬೂಬಕರ್(ರ) ಹೇಳಿದರು.

ಆ ಕರಿಯ ಗುಲಾಮನಿಗೆ ಇಂತಹ ಬೆಲೆಯೆ? ಅಲ್ಲದೆ ಆತ ಧಿಕ್ಕಾರಿಯೂ ಹೌದು! ಉಮಯ್ಯ ಮತ್ತು ಅಬೂಜಹಲ್ ಆಶ್ಚರ್ಯಚಕಿತರಾಗಿದ್ದರು.

ಅಂದರೆ ಅವರಿಗೆ ವ್ಯಾಪಾರದ ಭಾಷೆ ಮಾತ್ರ ಗೊತ್ತಿತ್ತು. ಜಾನುವಾರುಗಳಂತೆ ಮಾನವ ಜೀವಕ್ಕೂ ಬೆಲೆ ಕಟ್ಟುವ ವ್ಯವಹಾರ ಭಾಷೆ. ಮನುಷ್ಯರನ್ನು ಗೌರವಿಸುವ ಆದರ್ಶ ಅವರಿಗೆ ಅಪರಿಚಿತವಾಗಿತ್ತು. ಸಹೋದರತೆಗೆ ಬೆಲೆ ನೀಡುವ ತತ್ವಶಾಸ್ತ್ರವೂ ಅವರಿಗೆ ತಿಳಿದಿರಲಿಲ್ಲ.

ತನ್ನ ಈ ವ್ಯಾಪಾರದಿಂದ ಉಮಯ್ಯನಿಗೆ ತುಂಬಾ ಸಂತೋಷವಾಗಿತ್ತು. ಯಾವುದೇ ನಷ್ಟವಿಲ್ಲದೆ ಸಮಸ್ಯೆ ಪರಿಹಾರವಾಯಿತೆಂದು ಸಂತೃಪ್ತಿ ವ್ಯಕ್ತಪಡಿಸಿದ.

ಬಿಲಾಲ್‌ರ ಬಿಡುಗಡೆಯ ಸುದ್ದಿ ಪ್ರವಾದಿ(ಸ) ಹಾಗೂ ಅನುಯಾಯಿಗಳನ್ನು ಆನಂದ ಸಾಗರದಲ್ಲಿ ತೇಲಾಡಿಸಿತು. ಕಳೆದ ಹಲವು ದಿನಗಳಿಂದ ಇವರ ನಡುವೆ ಕರಿಯ ಗುಲಾಮನದ್ದೇ ಚರ್ಚೆ. ಕಣ್ಣೀರು ತುಂಬಿಕೊಳ್ಳದೆ ಆತನ ವಿಷಯವನ್ನು ಪ್ರಸ್ತಾಪಿಸುವುದು ಅವರಿಗೆ

ಸಾಧ್ಯವಾಗುತ್ತಿರಲಿಲ್ಲ, ದೈಹಿಕ ನೋವನ್ನು ಬಿಲಾಲ್ ಅನುಭವಿಸುತ್ತಿದ್ದರೂ ಇವರಿಗಾಗುತ್ತಿದ್ದ ಮಾನಸಿಕ ವೇದನೆ ಆಳವಾಗಿತ್ತು. ಕೊರಳಿಗೆ ಹಗ್ಗ ಕಟ್ಟಿ ಬತ್‌ಹಾ ಎಂಬ ಕಣಿವೆಯಲ್ಲಿ ಎಳೆದಾಡುತ್ತಿರುವಾಗ ಪ್ರವಾದಿಯವರ(ಸ) ಮನ ಚಡಪಡಿಸುತ್ತಿತ್ತು. ಕಾದ ಮರಳಿನ ಮೇಲೆ ಚಾಟಿಯೇಟನ್ನು ಸಹಿಸುತ್ತಿದ್ದ ಅವರ ಬಿಡುಗಡೆಗಾಗಿ ಪ್ರವಾದಿಯವರು(ಸ) ಹಲವು ಬಾರಿ ಅಲ್ಲಾಹನಲ್ಲಿ ಪ್ರಾರ್ಥಿಸಿದ್ದರು. ಅವರ ಅಂತರಂಗದ ಭಾವನೆಗಳನ್ನು ಪವಿತ್ರ ಗ್ರಂಥವು ಹೀಗೆ ಬಹಿರಂಗಪಡಿಸುತ್ತದೆ.

'ನೀವು ಕಷ್ಟವನ್ನು ಅನುಭವಿಸುವುದು ಅವರಿಗೆ ಅಸಹನೀಯವಾಗಿದೆ. ನಿಮ್ಮ ಬಗ್ಗೆ ಆತ ಅತೀವ ಕಾಳಜಿಯುಳ್ಳವನು. ಸತ್ಯವಿಶ್ವಾಸಿಗಳೊಂದಿಗೆ ಕರುಣೆ ಹಾಗೂ ವಾತ್ಸಲ್ಯ ಮಯಿಯೂ ಆಗಿದ್ದಾನೆ.'

ಅವಿಧೇಯ ಗುಲಾಮನು ಮಾರುಕಟ್ಟೆಯಲ್ಲಿ ಬೆಲೆಯಿಲ್ಲದ ಸರಕಾಗಿದ್ದಾನೆ. ಯಜಮಾನನಿಗೆ ಆತ ಅಪಾಯಕಾರಿಯಾದ್ದರಿಂದ ಅವನನ್ನು ಕೊಲ್ಲಬೇಕು. ಧಿಕ್ಕಾರಿಯಾದ ಗುಲಾಮನನ್ನು ಕೊಲ್ಲುವುದು ಪಾಪವಲ್ಲ, ಅವರ ನಿಯಮದಂತೆ ಆಡುಗಳನ್ನು ಯಜಮಾನ ದಿಬ್ಬ ಮಾಡುವುದು ಯಾವ ರೀತಿ ಅಪರಾಧವಾಗುವುದಿಲ್ಲವೋ ಗುಲಾಮರನ್ನು ಕೊಲ್ಲುವುದೂ ಅದೇ ರೀತಿಯಾಗಿತ್ತು. ಆದ್ದರಿಂದ ಬಿಲಾಲ್ ಮರಣವನ್ನು ನಿರೀಕ್ಷಿಸಿದ್ದರು. ತಾನು ಹೊಸ ಜೀವನಕ್ಕೆ ಮರಳಬಹುದೆಂಬುದು ಊಹನಾತೀತವಾದ ಸಂಗತಿಯಾಗಿತ್ತು. ಕೇವಲ ಓರ್ವ ಗುಲಾಮನನ್ನು ಕೂಡಾ ಹೊಸ ಧರ್ಮದಿಂದ ವಿಮುಖನಾಗಿಸಲು ಸಾಧ್ಯವಾಗದೆ ಕೊಲ್ಲುವುದು ತಮಗೆ ಅಪಮಾನವೆಂಬ ಅಬೂಜಹಲ್‌ನ ಅಹಂಕಾರ ಹಾಗೂ ಉಮಯ್ಯನ ಧನಮೋಹ ಬಿಲಾಲ್‌ರ ಜೀವವನ್ನು ರಕ್ಷಿಸಿತು. ಅಲ್ಲದೆ ಅನುಲ್ಲಂಘನೀಯವಾದ ದೇವ ವಿಧಿಯೇ ಮುಖ್ಯ ಕಾರಣವಾಗಿತ್ತು.

ಬಿಲಾಲ್ ಮಾನವ ಇತಿಹಾಸದ ಹೊಳೆಯುವ ಕಪ್ಪು ಮುತ್ತು. ಎಲ್ಲಾ ಕಾಲಗಳಲ್ಲೂ ಶೋಷಿತ, ಮರ್ದಿತ ವರ್ಗದವರ ಮನದಲ್ಲಿ ಬೆಳಕನ್ನು ಹರಿಸಿದ ದಿವ್ಯ ಚೇತನ. ಹೆಚ್ಚು ಹೆಚ್ಚು ತಿಕ್ಕುವುದರಿಂದ ಮುತ್ತಿನ ಹೊಳಪು ಹೆಚ್ಚಾಗುತ್ತದೆ. ತೀಕ್ಷ್ಣವಾದ ಅಗ್ನಿ ಪರೀಕ್ಷೆಗಳನ್ನು ಹಾದು ಬಂದವರ ದೃಢತೆ ಹಾಗೂ ಶೋಭೆಯೂ ಅಷ್ಟೆ ಬೆಂಕಿ ತಾಗದ ಚಿನ್ನಕ್ಕೆ ಹೊಳಪಿರುವುದಿಲ್ಲ, ಇದನ್ನು ಬಿಲಾಲ್ ಚೆನ್ನಾಗಿ ಅರಿತಿದ್ದರು. ಆದ್ದರಿಂದ ಭೀಕರ ಶಿಕ್ಷೆಗಳು ಅವರಿಗೆ ಕ್ಷುಲ್ಲಕವಾಯಿತು. ಉಮಯ್ಯ ಹಾಗೂ ಸಂಗಾತಿಗಳ ದೌರ್ಜನ್ಯಗಳು ಅಂತರಂಗದಲ್ಲಿ ಸ್ಫೂರ್ತಿಯ ಜ್ವಾಲೆಯನ್ನು ಹರಡುತ್ತಿತ್ತು. ಶರೀರವು ಕ್ರೂರ ಮರ್ದನಗಳಿಂದ ಜರ್ಝರಿತವಾಗುತ್ತಿದ್ದರೂ ಬಿಲಾಲ್‌ರ ಮನಸ್ಸು ಮುಗ್ಧ ಮೋಹಗಳ ಸುಂದರ ಸಾಮ್ರಾಜ್ಯದಲ್ಲಿ ವಿಹರಿಸುತ್ತಿತ್ತು.

ಸಾಧಾರಣವಾಗಿ ಅಗ್ನಿ ಜ್ವಾಲೆಗಳು ಶರೀರವನ್ನು ಸುಡುತ್ತದೆ. ನದಿಗಳು ಅವನನ್ನು ತನ್ನೊಳಗೆ ಸೆಳೆದುಕೊಳ್ಳುತ್ತದೆ. ಸೂರ್ಯನು ರೋಮವನ್ನೂ ಚರ್ಮವನ್ನೂ ಕರಟಿಸುತ್ತಾನೆ. ಆದರೆ ದಿವ್ಯ ಚೈತನ್ಯದ ಅಲೌಕಿಕ ಸಾಮ್ರಾಜ್ಯದ ಉನ್ನತ ಮನಸ್ಸಿನ ವ್ಯಕ್ತಿಗಳು ಪರೋಕ್ಷ

ಸಹಾಯದಿಂದ ಇಂತಹ ಪರೀಕ್ಷೆಗಳಲ್ಲಿ ಜಯಿಸಿದ್ದಾರೆ. ನಮ್ರೂದನ ಅಗ್ನಿಕುಂಡಕ್ಕೆ ಹಝ್ರತ್ ಇಬ್ರಾಹೀಮರ(ಅ) ರೋಮವನ್ನು ಉರಿಸಲು ಸಾಧ್ಯವಾಗಲಿಲ್ಲ, ಕೆಂಪು ಸಮುದ್ರಕ್ಕೆ ಪ್ರವಾದಿ ಮೂಸಾ(ಅ) ಹಾಗೂ ಅನುಯಾಯಿಗಳನ್ನು ನುಂಗಲು ಸಾಧ್ಯವಾಗಲಿಲ್ಲ, ಅರೇಬಿಯಾದ ಸುಡುಮರಳಿನಲ್ಲಿ ನಗ್ನದೇಹವು ಎಳೆದಾಡಲ್ಪಡುತ್ತಿರುವಾಗ ಹಾಗೂ ಎದೆಯ ಮೇಲೆ ಭಾರವಾದ ಕಲ್ಲಿರಿಸಿ, ಬಿಸಿಲ ಧಗೆಗೆ ಅಂಗಾತ ಮಲಗಿಸಿದರೂ ಉರಿಯುತ್ತಿರುವ ಸೂರ್ಯನಿಗೆ ಬಿಲಾಲ್‌ರನ್ನು ಕರಟಿಸಲು ಸಾಧ್ಯವಾಗಲಿಲ್ಲ, ಅದು ಸತ್ಯಧರ್ಮದ ಹುಟ್ಟಡಗಿಸಲು ಪ್ರಯತ್ನಿಸಿದವರು ಸೋತು ಸುಣ್ಣವಾದ ನಿಮಿಷಗಳಾಗಿದ್ದವು. ಈ ಮಹಾ ಘಟನೆಯನ್ನು ಇತಿಹಾಸವು ಅದರ ಚಿಪ್ಪಿನೊಳಗೆ ಕರಗಿಸದೆ ಸಂರಕ್ಷಿಸಿದೆ. ಬಿಲಾಲ್ ಈ ಅಪೂರ್ವ ಘಟನೆಗೆ ಸಾಕ್ಷಿಯಾದರು.

ಸ್ವತಂತ್ರನಾಗಿ ಪ್ರವಾದಿವರ್ಯರ(ಸ) ಬಳಿಗೆ ಬಂದ ಬಿಲಾಲ್‌ರನ್ನು ಅವರು ಆಲಂಗಿಸಿಕೊಂಡರು. ಕೈಹಿಡಿದು ಸಮೀಪವೇ ಕುಳ್ಳಿರಿಸಿ ಹೀಗೆ ಹೇಳಿದರು: 'ಸತ್ಯವಿಶ್ವಾಸ ಸ್ವೀಕರಿಸಿದ್ದಕ್ಕಾಗಿ ತೀವ್ರ ಮರ್ದನಕ್ಕೊಳಪಟ್ಟು ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗಿದ್ದೀರಿ. ಎಂತಹ ಅದೃಷ್ಟವಿದು.'

ಬಿಲಾಲ್ ಬಹಳ ಸಂತುಷ್ಟರಾಗಿದ್ದರು. ನಂತರದ ದಿನಗಳಲ್ಲಿ ಅವರು ತಮ್ಮ ಗತದಿನಗಳನ್ನು ನೆನಪಿಸುತ್ತಾ ಹೀಗೆ ಹೇಳುತ್ತಿದ್ದರು, 'ಅಲ್ಲಾಹನಿಗೆ ಕೃತಜ್ಞತೆಗಳು. ನನಗೆ ಆತನು ನೀಡಿದ ಸೌಭಾಗ್ಯದ ಬಗ್ಗೆ ಹೆಮ್ಮೆಯಿದೆ. ಗುಲಾಮನಾಗಿ ನಾನು ಮಕ್ಕಾ ತಲುಪದಿದ್ದರೆ, ನಮ್ಮ ದೇಶಕ್ಕೆ ಇಸ್ಲಾಮ್ ತಲುಪುತ್ತಿತ್ತೇ? ಅಥವಾ ನಾನು ಆಗ ಸತ್ಯಧರ್ಮ ಸ್ವೀಕರಿಸುತ್ತಿದ್ದೆನೋ ಎಂಬುದು ಯಾರಿಗೆ ತಿಳಿದಿದೆ?'

ಬಿಲಾಲ್‌ರ(ರ) ಜೀವನ ಈಗ ಅರ್ಥಪೂರ್ಣವಾಗಿತ್ತು. ಬದುಕಿಗೆ ನಿರ್ದಿಷ್ಟವಾದ ಗುರಿಯಿತ್ತು. ಮನದ ತುಂಬಾ ಐಶಾರಾಮದ ಸ್ವರ್ಗಲೋಕವೇ ತುಂಬಿತ್ತು. ಯಾವುದೇ ತಂಟೆ ತಕರಾರು ಇಲ್ಲದ, ರೋಗ ಮತ್ತು ಮರಣವಿಲ್ಲದ ಶಾಶ್ವತವಾದ ಸ್ವರ್ಗಸುಖದ ಕನಸಿನಲ್ಲಿ ವಿಹರಿಸುತ್ತಿದ್ದರು. ಅಲ್ಲಿ ಉಮಯ್ಯನಂತಹ ಮರ್ದಕರ ಚಾಟಿಯೇಟಿನ ಸುಳಿವಿಲ್ಲ, ಅಬೂಜಹಲನ ಖಡ್ಗವು ಝಳಪಿಸುವುದಿಲ್ಲ, ಆಬೂಲಹಬನ ಶೌರ್ಯ ಪರಾಕ್ರಮವನ್ನು ಕಾಣಬೇಕಾಗಿಲ್ಲ, ಅಬೂ ಸುಫ್‌ಯಾನ್‌ನ ಪರಿಹಾಸ್ಯವನ್ನು ಕೇಳಬೇಕಾಗಿಲ್ಲ.

ಬಿಲಾಲ್‌ರ(ರ) ಸ್ವಪ್ನದಲ್ಲಿ ಮರಣಾನಂತರದ ಸ್ವರ್ಗ ಮಾತ್ರವಲ್ಲ, ಭೂಮಿಯ ಸ್ವರ್ಗವೂ ಸೇರಿಕೊಂಡಿದೆ. ಪ್ರವಾದಿವರ್ಯರು(ಸ) ವಾಗ್ದಾನ ಮಾಡಿದ ಸ್ವರ್ಗ. ಅಕ್ರಮ-ಅನ್ಯಾಯವಿಲ್ಲದ ಹಾಗೂ ಮರ್ದನ-ಶೋಷಣೆ ನಡೆಯದ, ಸತ್ಯ-ನ್ಯಾಯದಿಂದ ತುಂಬಿರುವ, ಭದ್ರತೆ ಹಾಗೂ ರಕ್ಷಣೆ ದೊರೆಯುವ, ಶಾಂತಿ-ನೆಮ್ಮದಿ ತುಂಬಿದ ಭೂಮಿ, ಸನ್‌ಆದಿಂದ ಹದರುಲ್ ಮೌತ್‌ನವರೆಗೆ ಅಬಲೆಯಾದ ಮಹಿಳೆ ಒಂಟಿಯಾಗಿ ಪ್ರಯಾಣಿಸಲು ಸಾಧ್ಯವಿರುವ ದೇಶ! ತನ್ನಂತಹ ಮರ್ದಿತರಿಗೆ ಭೂಮಿಯ ಮೇಲೆ ಹಕ್ಕುಗಳು ಲಭಿಸುವ ಸುಂದರವಾದ ಲೋಕವನ್ನು

ಸಂದೇಶವಾಹಕರು ವಾಗ್ದಾನ ಮಾಡಿದ್ದರು. "ನಾವು ಭೂಮಿಯಲ್ಲಿ ತುಳಿಯಲ್ಪಟ್ಟವರ ಮೇಲೆ ಕೃಪೆ ತೋರಬೇಕೆಂದೂ ಅವರನ್ನು ನಾಯಕರಾಗಿ ಮಾಡಿ ಬಿಡಬೇಕೆಂದೂ ಅವರನ್ನೇ ಉತ್ತರಾಧಿಕಾರಿಗಳಾಗಿ ಮಾಡಬೇಕೆಂದೂ ಭೂಮಿಯಲ್ಲಿ ಅವರಿಗೆ ಪ್ರಭುತ್ವ ನೀಡಬೇಕೆಂದೂ ಫಿರ್‌ಔನ್, ಹಾಮಾನ್ ಮತ್ತು ಅವರ ಸೇನೆಗಳಿಗೆ ಯಾವುದರ ಭಯವಿತ್ತೋ ಅದನ್ನೇ ತೋರಿಸಿಕೊಡಬೇಕೆಂದೂ ಬಯಸಿದ್ದೆವು." (ಪವಿತ್ರ ಕುರ್‌ಆನ್, 28:5)

ಬಿಲಾಲ್(ರ) ಗುಲಾಮನಾದ್ದರಿಂದ ಅವರಿಗೆ ಆಶೆ ಆಕಾಂಕ್ಷೆಗಳಿರಲಿಲ್ಲ, ಜೀವನದ ಬಗ್ಗೆ ನಿರ್ಲಿಪ್ತರಾಗಿದ್ದರು. ಗುಲಾಮನಿಗೆ ಸ್ವಂತದ್ದೆಂದು ಯಾವುದೂ ಇರಲಿಲ್ಲ, ಯಜಮಾನನಾಗುವ ಮೂಲಕ ಇತರರನ್ನು ನಿಯಂತ್ರಿಸುವ ಹಾಗೂ ಸ್ವಂತ ಸಂಪಾದನೆ ಮಾಡುವ ಮೂಲಕ ಖಾಸಗಿ ಸೊತ್ತು ಶೇಖರಿಸುವಂತಹ ವಿಚಾರಗಳನ್ನು ಊಹಿಸುವುದೂ ಅಸಾಧ್ಯವಾಗಿತ್ತು. ಅಂತಹ ಮೋಹಗಳು ಆತನಿಗೆ ಅಪರಿಚಿತವಾಗಿತ್ತು.

ಉಮಯ್ಯನ ಬಳಿಯಲ್ಲಿರುವಾಗ ಬಿಲಾಲ್‌ರಿಗೆ ಸುಲಭದಲ್ಲಿ ಆಹಾರ ದೊರೆಯುತ್ತಿತ್ತು. ಪ್ರಾಣಿಗಳಿಗೆ ನೀಡುವಂತಹ ಆಹಾರವಾಗಿದ್ದರೂ ಸಹ ಹಸಿವಿನ ರುಚಿ ಅವರಿಗೆ ತಿಳಿದಿರಲಿಲ್ಲ, ಏಕೆಂದರೆ ಉಮಯ್ಯ ಬಿಲಾಲ್‌ರಿಗೆ ಆಹಾರ ನೀಡುತ್ತಿದ್ದ. ಗುಲಾಮನು ದೃಢಕಾಯನೂ ಶಕ್ತಿವಂತನೂ ಆಗಿರಬೇಕಾದುದು ಯಜಮಾನನಿಗೆ ಅಗತ್ಯವಾಗಿತ್ತು. ಅಂತಾದರೆ ಮಾತ್ರ ಆತನಿಂದ ಶ್ರಮದಾಯಕ ಕೆಲಸ ಮಾಡಿಸಲು ಸಾಧ್ಯ. ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕವೂ ಅವರಿಗೆ ಆಹಾರ ದೊರೆಯುತ್ತಿತ್ತು. ಬಿಲಾಲ್ ಸಾಯಬಾರದೆಂದು ಉಮಯ್ಯ ಭಾವಿಸಿದ್ದ, ಏಕೆಂದರೆ ಬಿಲಾಲ್ ಸತ್ತರೆ, ಆತನನ್ನು ಹಿಂಸಿಸಲು ಹಾಗೂ ಆತನ ನರಳಾಟ ನೋಡಿ ಸಂತೋಷಪಡಲು ಸಾಧ್ಯವಾಗಲಾರದು. ಆದ್ದರಿಂದ ಆತ ತನ್ನನ್ನು ಧಿಕ್ಕರಿಸಿದರೆ ಚಿತ್ರಹಿಂಸೆ ನೀಡಿ ಅದನ್ನು ಆಸ್ವದಿಸಬಹುದೆಂಬ ಮನಃಸ್ಥಿತಿ ಆತನದ್ದಾಗಿತ್ತು.

ಪ್ರವಾದಿಯವರ(ಸ) ಬಳಿಗೆ ಬಂದ ನಂತರ ಬಿಲಾಲ್ ಹಸಿವಿನ ತೀವ್ರತೆಯನ್ನು ಅನುಭವಿಸಿದರು. ಇಸ್ಲಾಮಿನ ಶತ್ರುಗಳು ಪ್ರವಾದಿ(ಸ) ಹಾಗೂ ಅವರ ಸಂಗಾತಿಗಳನ್ನು ಕ್ರೂರ ಹಿಂಸೆಗೆ ಗುರಿಪಡಿಸಿದ್ದರು. ಆದರೂ ಕೂಡಾ ಇಸ್ಲಾಮಿನ ಪ್ರಗತಿಗೆ ಯಾವುದೇ ಅಡ್ಡಿಯಾಗದ್ದನ್ನು ಕಂಡು ಹತಾಶರಾದ ಕುರೈಶಿಗಳು ಹೊಸ ತಂತ್ರ ರೂಪಿಸಿದರು. ಹಾಶಿಮ್ ಹಾಗೂ ಮುತ್ತಲಿಬ್ ಗೋತ್ರಗಳು ಮತ್ತು ಮುಸ್ಲಿಮರಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಯಿತು. ಆ ಗೋತ್ರಗಳೊಂದಿಗೆ ವ್ಯಾಪಾರ, ವ್ಯವಹಾರ, ಸಂಬಂಧಗಳು, ಕ್ರಯ ವಿಕ್ರಯ ನಡೆಸುವುದಿಲ್ಲವೆಂಬ ಬರಹವನ್ನು ಕಅಬಾದ ಗೋಡೆಗೆ ತೂಗು ಹಾಕಲಾಯಿತು. ಸಾಮೂಹಿಕ ಬಹಿಷ್ಕಾರ ಹಾಗೂ ಹಸಿವು, ಹಿಂಸೆಗಿಂತಲೂ ಹೆಚ್ಚು ಪರಿಣಾಮ ಬೀರೀತೆಂದು ಅವರು ಭಾವಿಸಿದ್ದರು. ಕ್ರೂರ ದೌರ್ಜನ್ಯಗಳೊಂದಿಗೆ ಬಹಿಷ್ಕಾರವೂ ಆರಂಭವಾಯಿತು. ಇದು ನಿರಂತರ ಎರಡ್ಮೂರು ವರ್ಷಗಳ ವರೆಗೆ ಮುಂದುವರಿಯಿತು. ಈ ಕಾಲವು

ಪ್ರವಾದಿ(ಸ) ಮತ್ತು ಅನುಯಾಯಿಗಳಿಗೆ ತೀವ್ರ ಸಂಕಷ್ಟದ ದಿನಗಳಾಗಿದ್ದವು. ಹಸಿರೆಲೆಗಳನ್ನು ತಿಂದು ಹಸಿವು ತಣಿಸಿಕೊಂಡರು. ಚುರುಗುಟ್ಟುತ್ತಿದ್ದ ಹೊಟ್ಟೆಯಿಂದ ದಿನರಾತ್ರೆಗಳನ್ನು ಕಳೆದರು. ಮೊದಲೇ ತೀವ್ರವಾದ ಹಿಂಸೆ, ದೌರ್ಜನ್ಯಗಳಿಗೆ ಗುರಿಯಾಗಿ ಜರ್ಝರಿತರಾಗಿದ್ದ ಬಿಲಾಲ್‌ರಂತಹವರ ಪಾಡಂತೂ ವರ್ಣನಾತೀತವಾಗಿತ್ತು. ಹಸಿವಿನೊಂದಿಗೆ ರೋಗವೂ ಬೆರೆತುಕೊಂಡಿತು. ಆದರೂ ಎಲ್ಲರೂ ಸತ್ಯಧರ್ಮಕ್ಕಾಗಿ ಸಹಿಸಿಕೊಂಡರು. ಅವರ ಸಹನೆಯು ಅತ್ಯಪೂರ್ವವಾಗಿತ್ತು. ಇದರಿಂದ ಶತ್ರುಗಳಿಗೆ ತಮ್ಮ ಬಹಿಷ್ಕಾರವನ್ನು ಕೊನೆಗೊಳಿಸಬೇಕಾಯಿತು. ಅವರು ಬಹಿಷ್ಕಾರವನ್ನು ಹಿಂದಕ್ಕೆ ಪಡೆಯಲು ನಿರ್ಬಂಧಿತರಾದರು.

ಮಕ್ಕಾದ ಬೆಟ್ಟದ ತಪ್ಪಲುಗಳಲ್ಲಿ ಅವಿತಿದ್ದ ಇಸ್ಲಾಮಿನ ಶಬ್ದವು ಇಡೀ ಅರೇಬಿಯಾದಲ್ಲಿ ಪ್ರತಿಧ್ವನಿಸಿತು. ವಿವಿಧ ಗೋತ್ರಗಳಲ್ಲಿ ವ್ಯಾಪಕ ಪ್ರಚಾರ ಪಡೆಯಿತು. ವ್ಯಾಪಾರ ಹಾಗೂ ಕಅಬಾ ಸಂದರ್ಶನಕ್ಕೆ ನಿರಂತರವಾಗಿ ಆಗಮಿಸುತ್ತಿದ್ದ ಯಾತ್ರಾ ತಂಡಗಳಲ್ಲಿ ಪ್ರವಾದಿವರ್ಯರು(ಸ) ಇಸ್ಲಾಮನ್ನು ಪ್ರಚಾರಗೊಳಿಸಿದರು. ಅಲ್ಲಿಗೆ ಬರುವವರು ಏಕದೇವತ್ವದ ಸಂದೇಶ ಲಭಿಸದೆ ಮರಳಬಾರದೆಂದು ಪ್ರವಾದಿವರ್ಯರು(ಸ) ತೀರ್ಮಾನಿಸಿದ್ದರು. ಹೃದಯ ತಂತಿಗಳನ್ನು ಮೀಟಿ, ಸುಂದರವಾದ ಶೈಲಿಯಲ್ಲಿ, ಮಾಧುರ್ಯದ ಧ್ವನಿಯೊಂದಿಗಿನ ಬಿಲಾಲ್‌ರ ಕುರ್‌ಆನ್ ಪಾರಾಯಣವು ಹಲವರನ್ನು ಬಹಳವಾಗಿ ಆಕರ್ಷಿಸುತ್ತಿತ್ತು.

ಯಾತ್ರಾ ತಂಡಗಳನ್ನು ಭೇಟಿಯಾಗುವ ಹೆಚ್ಚಿನ ಸಂದರ್ಭಗಳಲ್ಲಿ ಬಿಲಾಲ್‌ರು ಪ್ರವಾದಿವರ್ಯರೊಂದಿಗಿದ್ದರು. ಅಲ್ಲದೆ ಸುಹೈಬ್, ಅಮ್ಮಾರ್ ಹಾಗೂ ಖಬ್ಬಾಬ್‌ರಂತವರೂ ಇರುತ್ತಿದ್ದರು. ಯಾತ್ರಾರ್ಥಿಗಳು ಇಸ್ಲಾಮಿನ ಸಂದೇಶವನ್ನು ಆಲಿಸದಿರಲು ಸತ್ಯನಿಷೇಧಿಗಳು ಹಲವಾರು ಕುತಂತ್ರ ಹಾಗೂ ಅಪಪ್ರಚಾರಗಳನ್ನು ನಡೆಸಿದರು. ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ.

ಅಕ್ರಅ್ ಇಬ್ನು ಹಾಬಿಸ್ ತಮೀಮ್ ಮತ್ತು ಉಮೈನ ಫಿಸಾರಿ ಎಂಬವರಿಬ್ಬರು ಮುದರ್ ಗೋತ್ರದ ಮುಖಂಡರಾಗಿದ್ದರು. ಇವರಿಬ್ಬರೂ ಇಸ್ಲಾಮ್ ಸ್ವೀಕರಿಸಿದ್ದರೂ ಕೂಡಾ ಧರ್ಮದೊಳಗೆ ಸಂಪೂರ್ಣ ಪ್ರವೇಶಿಸಿರಲಿಲ್ಲ. ಆದ್ದರಿಂದ ಸಾಮಾಜಿಕ ನೀತಿ ನಿಯಮಗಳ ಮಹತ್ವ ಅವರಿಗೆ ತಿಳಿದಿರಲಿಲ್ಲ. ಅವರು ಕೇವಲ ಹೆಸರು ಹಾಗೂ ಪ್ರತಿಷ್ಠೆಗಾಗಿ ಇಸ್ಲಾಮ್ ಸ್ವೀಕರಿಸಿದ್ದರು. ತಾವು ಅಜ್ಞಾನ ಕಾಲದ ವಿಶ್ವಾಸ ಮತ್ತು ಆಚಾರಗಳ ವಿರುದ್ಧ ಧ್ವನಿಯೆತ್ತಿದ ಹೋರಾಟಗಾರರಾಗಿ ಗುರುತಿಸಿಕೊಳ್ಳಬೇಕೆಂದು ಅವರು ಬಯಸಿದ್ದರು.

ಆದ್ದರಿಂದ ಅವರು ತಾವಿಬ್ಬರೂ ಪ್ರವಾದಿವರ್ಯರ(ಸ) ಜೊತೆಗೇ ಇರಬೇಕೆಂದು ಇಷ್ಟಪಟ್ಟರು. ತಾವು ಪ್ರವಾದಿಯವರ(ಸ) ಸಂಗಡಿಗರೆಂದು ತೋರಿಸುವುದು ಮಾತ್ರವಲ್ಲ ಜನರಿಗೆ ನಮ್ಮ ಸ್ಥಾನಮಾನ ಮನವರಿಕೆಯಾಗಲೆಂದೂ ಅವರ ಇಚ್ಛೆಯಾಗಿತ್ತು. ಈ

ಉದ್ದೇಶದಿಂದ ಪ್ರವಾದಿವರ್ಯರ(ಸ) ಬಳಿಗೆ ಬಂದಾಗ ಕಂಡ ದೃಶ್ಯದಿಂದ ಅವರು ದಂಗಾದರು. ಬಿಲಾಲ್, ಸುಹೈಬ್, ಅಮ್ಮಾರ್ ಮತ್ತು ಖಬ್ಬಾಬ್ ಪ್ರವಾದಿಯವರೊಂದಿಗಿದ್ದರು! ಅದು ಅವರನ್ನು ನಿರಾಶೆಗೊಳಿಸಿತು. ಈ ಗುಲಾಮರು ಹಾಗೂ ದುರ್ಬಲರೊಂದಿಗೆ ನಾವೂ ಸೇರಿಕೊಳ್ಳುವುದು ಅಪಮಾನವೆಂದು ಅವರು ಭಾವಿಸಿದರು. ಅವರು ಇಸ್ಲಾಮನ್ನು ಘನತೆ ಹಾಗೂ ಶೌರ್ಯವನ್ನು ತೋರಿಸುವ ಮಾರ್ಗವೆಂದು ಗ್ರಹಿಸಿದ್ದರು. ಆದರೆ ವಸ್ತುಸ್ಥಿತಿ ಈಗ ಭಿನ್ನವಾಗಿದೆ. ದುರ್ಬಲ ಗುಲಾಮರು ಹಾಗೂ ಅಸಹಾಯಕರು ಪ್ರವಾದಿವರ್ಯರ(ಸ) ಆಪ್ತ ಸಂಗಾತಿಗಳಾಗಿದ್ದಾರೆ! ಆದ್ದರಿಂದ ಅಕ್ರಅ್, ಉಮೈನನೊಡನೆ ಕೇಳಿದ:

'ಈ ಗುಲಾಮರನ್ನು ಪ್ರವಾದಿಯವರು ಯಾಕೆ ತನ್ನೊಂದಿಗೆ ಸೇರಿಸಿಕೊಂಡಿದ್ದಾರೆಂದೇ ನನಗೆ ಅರ್ಥವಾಗುತ್ತಿಲ್ಲ.'

'ಅವರು ಪ್ರವಾದಿಯ ಬಹಳ ಆತ್ಮೀಯರು?' ಉಮೈನ ಹೇಳಿದ.

'ಇವರಿಗಿಂತ ಉತ್ತಮ ವ್ಯಕ್ತಿಗಳು ಬೇರೆ ಸಿಗಲಿಲ್ಲವೇ?' ಅಕ್ರಅ್ ಪ್ರಶ್ನಿಸಿದರು.

'ಅವರು ಪ್ರವಾದಿವರ್ಯರನ್ನು ಒಂದು ಕ್ಷಣವೂ ಬಿಟ್ಟಿರುವುದಿಲ್ಲ. ವಿಶೇಷವಾಗಿ ಬಿಲಾಲ್ ಸದಾ ಅವರ ಜೊತೆಯಲ್ಲೇ ಇರುತ್ತಾರೆ.

'ನಾವೂ ಅವರೊಂದಿಗೆ ಸೇರಿಕೊಳ್ಳೋಣವೇ?'

'ಬೇಡ' ಉಮೈನ ಹೇಳಿದ.

ಮತ್ತೇನು ಮಾಡುವುದು?

'ನಾವು ಪ್ರವಾದಿಯವರ ಬಳಿಗೆ ಹೋದಾಗ ಆ ಗುಲಾಮರೆಲ್ಲರೂ ದೂರ ಸರಿದು ನಿಲ್ಲುವಂತೆ ನಾನು ಅವರೊಡನೆ ಹೇಳುತ್ತೇನೆ.'

'ಅದು ಸಾಧ್ಯವಾದೀತೇ?' ಅಕ್ರಅ್ ಸಂಶಯ ವ್ಯಕ್ತಪಡಿಸಿದ.

'ಖಂಡಿತವಾಗಿಯೂ ಸಾಧ್ಯವಾಗಬಹುದು?' ಉಯೈನ ಹೇಳಿದ.

ಹೀಗೆ ಅವರೀರ್ವರೂ ಪ್ರವಾದಿವರ್ಯರ(ಸ) ಬಳಿಗೆ ಬಂದು ತಮ್ಮ ಬೇಡಿಕೆಯನ್ನು ಮುಂದಿಟ್ಟರು. ಪ್ರವಾದಿಯವರು ಇವರ ಬೇಡಿಕೆಯನ್ನು ಸರಿಯಾಗಿ ಗ್ರಹಿಸದೆ ಒಪ್ಪಿಕೊಂಡರು. ಹೇಗಾದರೂ ಇವರು ಇಸ್ಲಾಮ್ ಸ್ವೀಕರಿಸಲೆಂಬ ಆಶೆ ಬೇಡಿಕೆಯನ್ನು ಒಪ್ಪಲು ಪ್ರವಾದಿವರ್ಯರನ್ನು(ಸ) ಪ್ರೇರೇಪಿಸಿತ್ತು. ಇವರು ದೂರ ನಿಲ್ಲಿಸಲು ಬಯಸಿದ್ದವರ ರಕ್ಷಣೆಯನ್ನು ಪ್ರವಾದಿಯವರು(ಸ) ಬಯಸಿದ್ದರು. ತನ್ನ ಅನುಯಾಯಿಗಳು ಅನುಭವಿಸುತ್ತಿರುವ ಕ್ರೂರ ಹಿಂಸೆಗಳು ಮುದರ್ ಗೋತ್ರದ ನಾಯಕರ ಇಸ್ಲಾಮ್ ಸ್ವೀಕಾರದಿಂದ ಕೊನೆಗೊಂಡೀತೆಂಬ ಆಶೆಯಿಂದ ಪ್ರವಾದಿವರ್ಯರು(ಸ) ಅವರ ಕೋರಿಕೆಯನ್ನು ಮನ್ನಿಸಿದರು.

ಬಿಲಾಲ್ ಹಾಗೂ ಸಂಗಡಿಗರು ತಾತ್ಕಾಲಿಕವಾಗಿ ತಮ್ಮ ಬಳಿಯಿಂದ ಮರಳಲು ಸಂದೇಶವಾಹಕರು ಸೂಚಿಸಿದರು. ಬಳಿಕ ಅಕ್ರಅ್ ಹಾಗೂ ಉಮ್ಯೈನ ಪ್ರವಾದಿಯವರ ಪಕ್ಕದಲ್ಲಿ ಕುಳಿತುಕೊಂಡರು. ಇದೇ ಸ್ಥಿತಿ ಮುಂದುವರಿಯಲು ಪ್ರವಾದಿಯವರೊಡನೆ ಒಪ್ಪಂದ ಮಾಡಿಕೊಳ್ಳುವಂತೆ ವಿನಂತಿಸಿದರು. ಆಗ ಒಪ್ಪಂದ ಬರೆಯಲು ಅಲಿಯವರಿಗೆ(ರ) ಸೂಚಿಸಲಾಯಿತು. ತಟ್ಟನೆ ಪ್ರವಾದಿವರ್ಯರ(ಸ) ಮುಖಭಾವ ಬದಲಾಯಿತು. ಹಣೆಯಲ್ಲಿ ಬೆವರು ಸಾಲುಗಟ್ಟಿತು. ಪ್ರವಾದಿವರ್ಯರಿಗೆ(ಸ) ದೇವವಾಣಿ ಅವತೀರ್ಣಗೊಳ್ಳುತ್ತಿದೆಯೆಂದು ಅಲಿಯವರಿಗೆ ತಿಳಿಯಿತು. ಬಳಿಕ ಅವರು ಸಹಜಸ್ಥಿತಿಗೆ ಮರಳಿದಾಗ ಪ್ರವಾದಿವರ್ಯರು(ಸ) ಕರಾರು ಪತ್ರವನ್ನು ಎಸೆದರು ಹಾಗೂ ಬರೆಯುವುದನ್ನು ನಿರಾಕರಿಸಿದರು. ಅಲ್ಲದೆ ಬಿಲಾಲ್ ಹಾಗೂ ಸಂಗಡಿಗರನ್ನು ಕೂಡಲೇ ಕರೆ ತರುವಂತೆ ಆದೇಶಿಸಿದರು. ಅವರೆಲ್ಲರೂ ತಮ್ಮ ಬಳಿಗೆ ತಲುಪುವ ವರೆಗೂ ಪ್ರವಾದಿಯವರು(ಸ) ಗಾಬರಿಗೊಂಡಿದ್ದರು. ಮರಳಿ ಬಂದಾಗ ಎದ್ದು ಸಂತೋಷದಿಂದ ಸ್ವಾಗತಿಸಿ ಸಮೀಪವೇ ಕುಳ್ಳಿರಿಸಿದರು ಮತ್ತು ಆಗ ತಾನೇ ಅವತೀರ್ಣವಾದ ದೇವವಾಣಿಯನ್ನು ಓದಿದರು.

**"ಯಾರು ತಮ್ಮ ಪ್ರಭುವನ್ನು ಸಂಜೆ ಮುಂಜಾನೆಗಳಲ್ಲಿ ಪ್ರಾರ್ಥಿಸುತ್ತಾರೋ ಹಾಗೂ ಅವನ ಸಂಪ್ರೀತಿಯನ್ನರಸುತ್ತಿರುತ್ತಾರೋ ಅವರನ್ನು ನಿಮ್ಮಿಂದ ದೂರಕ್ಕೆ ಅಟ್ಟಬೇಡಿರಿ. ಅವರ ಲೆಕ್ಕದಲ್ಲಿನ ಯಾವ ಭಾರವೂ ನಿಮ್ಮ ಮೇಲಿಲ್ಲ ಮತ್ತು ನಿಮ್ಮ ಲೆಕ್ಕದಲ್ಲಿನ ಯಾವ ಭಾರವೂ ಅವರ ಮೇಲಿಲ್ಲ, ಹೀಗಿದ್ದರೂ ನೀವು ಅವರನ್ನು ದೂರಕ್ಕೆ ಅಟ್ಟಿದರೆ ನೀವು ಅಕ್ರಮಿಗಳಲ್ಲಿ ಗಣಿಸಲ್ಪಡುವಿರಿ." (ಪವಿತ್ರ ಕುರ್‌ಆನ್, 6:52)**

ಈ ಕುರ್‌ಆನ್ ವಾಕ್ಯದ ಅವತೀರ್ಣಕ್ಕೆ ಸಂಬಂಧಿಸಿ ಇನ್ನೊಂದು ಅಭಿಪ್ರಾಯವೂ ಇದೆ. ಅದರಲ್ಲಿಯೂ ಬಿಲಾಲ್ ಮುಖ್ಯ ವ್ಯಕ್ತಿಯಾಗಿದ್ದಾರೆ. ಕುರೈಶ್ ಪ್ರಮುಖರು ಹೇಳಿದರು. ಮುಹಮ್ಮದನೊಂದಿಗೆ ಇರುವವರಲ್ಲಿ ಹೆಚ್ಚಿನವರು ಗುಲಾಮರು ಹಾಗೂ ದುರ್ಬಲರಾಗಿದ್ದಾರೆ. ಅವರು ನಮಗಿಂತ ತುಂಬಾ ಕೀಳ್ದರ್ಜೆಯವರಾಗಿದ್ದಾರೆ. ಇವರೊಂದಿಗೆ ನಾವು ಹೇಗೆ ಕುಳಿತುಕೊಳ್ಳುವುದು? ಬಿಲಾಲ್, ಸುಹೈಬ್, ಅಮ್ಮಾರ್ ಹಾಗೂ ಖಬ್ಬಾಬ್‌ರಂತಹವರು ಮಾತ್ರ ನಮ್ಮ ನಡುವಿನಿಂದ ಆ ದೇವನಿಗೆ ಲಭಿಸಿದ್ದಾರೆ.

ಹೀಗೆ ಗತಕಾಲವನ್ನು ಹೇಳಿ ಪರಿಹಾಸ್ಯ ಮಾಡುತ್ತಿದ್ದ ಶತ್ರುಗಳಿಗೆ ಉತ್ತರವಾಗಿ ಈ ವಾಕ್ಯ ಅವತೀರ್ಣವಾಗಿದೆ. ಆದ್ದರಿಂದ ಈ ದಿವ್ಯವಾಣಿ ಬಿಲಾಲ್ ಹಾಗೂ ಸಂಗಡಿಗರನ್ನು ಬಹಳ ಸಂತುಷ್ಟಗೊಳಿಸಿತು. ತಮ್ಮನ್ನು ಹೊಗಳಿ ಅಲ್ಲಾಹನ ವಾಣಿ ಅವತೀರ್ಣವಾದುದಕ್ಕಿಂತ ಮಿಗಿಲಾದ ಸಂತೋಷ ಪ್ರವಾದಿ ಸಂಗಾತಿಗಳಿಗೆ ಇರಲು ಸಾಧ್ಯವೇ?

ಬಿಲಾಲ್ ಹಾಗೂ ಅಮ್ಮಾರ್‌ರಂತಹ ದುರ್ಬಲರು ಪ್ರವಾದಿವರ್ಯರ(ಸ) ಸಂಗಾತಿಗಳಾಗಿರುವುದು ಕುರೈಶ್ ಪ್ರಮುಖರನ್ನು ಕೋಪಗೊಳಿಸುತ್ತಿತ್ತು. ಅವರನ್ನು ದೂರ

ಮಾಡಿದರೆ ನಾವು ನಿಮ್ಮೊಡನೆ ಸೇರಿಕೊಳ್ಳುವೆವು ಎಂದು ಆ ಮುಖಂಡರು ಹೇಳುತ್ತಿದ್ದರು. ಆದರೆ ಈ ಬಲಾಢ್ಯರ ಬೇಡಿಕೆಯನ್ನು ನಿರಾಕರಿಸಿ, ಮರ್ದಿತ ಮುಸ್ಲಿಮರೊಡನೆ ಒಡನಾಟವನ್ನು ಮುಂದುವರಿಸಬೇಕೆಂದು ಅಲ್ಲಾಹನು ಆದೇಶಿಸಿದನು.

**"ತಮ್ಮ ಪ್ರಭುವಿನ ಸಂಪ್ರೀತಿಯ ಪ್ರಾಪ್ತಿಯನ್ನು ಬಯಸಿ ಬೆಳಗುಬೈಗುಗಳಲ್ಲಿ ಅವನನ್ನು ಪ್ರಾರ್ಥಿಸುತ್ತಿರುವವರ ಸಹವಾಸದಲ್ಲಿರಲು ನಿಮ್ಮ ಮನಸ್ಸನ್ನು ಸಂತೃಪ್ತಗೊಳಿಸಿಕೊಳ್ಳಿರಿ ಮತ್ತು ಅವರ ಕಡೆಯಿಂದ ನಿಮ್ಮ ದೃಷ್ಟಿಯನ್ನೆಂದೂ (ಬೇರೆ ಕಡೆಗೆ) ತಿರುಗಿಸಬೇಡಿರಿ..."**

**(ಪವಿತ್ರ ಕುರ್‌ಆನ್, 18:28)**

ಹೀಗೆ ಗುಲಾಮನಾಗಿದ್ದ ಬಿಲಾಲ್‌ರ ವಿಷಯವನ್ನು ಸರ್ವಶಕ್ತನು ತನ್ನ ಪವಿತ್ರ ಗ್ರಂಥದಲ್ಲಿ ಒಂದಕ್ಕಿಂತ ಅಧಿಕ ಬಾರಿ ಪ್ರಸ್ತಾಪಿಸಿದ್ದಾನೆ. ಕೆಸರು ಹಾಗೂ ಕೊಳೆಯಲ್ಲಿ ಮೀಯುತ್ತಿದ್ದ ಓರ್ವ ಕರಿಯ ಸಾಮಾನ್ಯ ಗುಲಾಮನಿಗೆ ಪವಿತ್ರ ಕುರ್‌ಆನ್ ಗೌರವಾರ್ಹ ಸ್ಥಾನವನ್ನು ನೀಡಿರುವುದು ಗಮನಾರ್ಹವಾಗಿದೆ.

# ಮದೀನಾದಲ್ಲಿ

ಪ್ರೀತಿಯ ಮಕ್ಕಾ ನಗರವೇ! ನಾವು ನಿನಗೆ ವಿದಾಯ ಕೋರಬೇಕಾಗಿದೆ. ನಿನ್ನ ಮಣ್ಣಿನಲ್ಲಿ ಬದುಕಲು ನಮಗೆ ಸಾಧ್ಯವಿಲ್ಲ. ನೀನು ಹಿಂಸೆಗಳ ತಾಣವಾಗಿರುವೆ. ಅಲ್ಲದೆ ನೀನು ಎಲ್ಲವನ್ನೂ ನಮಗೆ ನಿಷೇಧಿಸಿರುವೆ. ನಮ್ಮ ಪ್ರೀತಿಯ, ಸೌಹಾರ್ದದ ಸಂಬಂಧಗಳು ಕೊನೆಗೊಂಡಿದೆ. ಮಕ್ಕಾ ಪಟ್ಟಣವೇ! ದೇಹದಲ್ಲಿ ಬೆವರಿಳಿಸುತ್ತಿರುವೆ. ನಾವಿನ್ನು ನಿನ್ನಿಂದ ಕಷ್ಟವನ್ನು ತಾಳಲಾರೆವು. ಈ ಕಠಿಣ ಹಿಂಸೆ ಹಾಗೂ ಪರೀಕ್ಷೆಗಳನ್ನು ಅನುಭವಿಸಲು ನಾವೇಕೆ ಇಲ್ಲಿಯೇ ಉಳಿಯಬೇಕು? ಪ್ರಿಯ ನಗರವೇ! ನಾನು ಮತ್ತು ನೀನು ಅಪರಾಧಿಗಳಲ್ಲ, ನಿನ್ನ ಮಡಿಲಲ್ಲಿರುವ ಜನರೇ ನಿಜವಾಗಿ ದ್ರೋಹಿಗಳಾಗಿದ್ದಾರೆ! ಅವರು ಬೆಳಕಿನ ವಿರುದ್ಧ ಕಣ್ಣು ಮುಚ್ಚಿದ್ದಾರೆ. ಆದ್ದರಿಂದ ನಮ್ಮ ಅಗಲುವಿಕೆ ಅನಿವಾರ್ಯವಾಗಿದೆ. ಮಕ್ಕಾ ಪಟ್ಟಣವೇ! ನಿನಗಿದೋ ವಿದಾಯ! ವಿದಾಯ! ಅಲ್ಲಾಹನು ಬೇರೊಂದು ತೀರ್ಮಾನ ಕೈಗೊಳ್ಳುವ ವರೆಗೂ ನಿನಗೆ ವಿದಾಯ! ಬಿಲಾಲ್‌ರ ಗದ್ಗದಿತ ಮಾತುಗಳು ಬಳಿಯಲ್ಲಿದ್ದವರನ್ನೂ ಕಣ್ಣೀರಿನಿಂದ ತೋಯಿಸಿತು. ಬಿಲಾಲ್‌ರಿಗೆ ಅವರ ಮಾತಿಗಿಂತ ವೇಗವಾಗಿ ಕಣ್ಣೀರು ಕಪೋಲದ ಮೇಲೆ ಹರಿಯುತ್ತಿತ್ತು.

ಮಕ್ಕಾದಲ್ಲಿ ಇಸ್ಲಾಮೀ ಸಂದೇಶ ಪ್ರಚಾರ ಆರಂಭವಾಗಿ ವರ್ಷವಾಗುವಾಗಲೇ ವಿಜಯದ ಬೆಳ್ಳಿ ರೇಖೆಗಳು ಗೋಚರವಾಗಲಾರಂಭಿಸಿತು. ಯಸ್ರಿಬ್‌ನಲ್ಲಿ ಔಸ್ ಗೋತ್ರದ ಇಯಾಝ್ ಇಬ್ನು ಮುಆದ್ ಪ್ರಥಮವಾಗಿ ಇಸ್ಲಾಮ್ ಸ್ವೀಕರಿಸುವ ಮೂಲಕ ಇಸ್ಲಾಮ್ ಪ್ರಬಲವಾಗಲಾರಂಭಿಸಿತು. ನಂತರ ಖಝ್ರಜ್ ಗೋತ್ರದ ಒಂದು ತಂಡ ಮಕ್ಕಾಕ್ಕೆ ತಲುಪಿ ಇಸ್ಲಾಮ್ ಧರ್ಮದ ಅನುಯಾಯಿಗಳಾದರು. ಬಳಿಕ ಯಸ್ರಿಬ್‌ನಿಂದ ಆಗಮಿಸಿದ ಎರಡು ಮಹಿಳೆಯರನ್ನೊಳಗೊಂಡ ಎಪ್ಪತ್ತೈದು ಮುಸ್ಲಿಮರಿದ್ದ ತಂಡದೊಂದಿಗೆ ಪ್ರವಾದಿಯವರು(ಸ) ಒಪ್ಪಂದ ಮಾಡಿಕೊಂಡರು. ಮಕ್ಕಾದಿಂದ ಬರುವ ಮುಸ್ಲಿಮರಿಗೆ ಎಲ್ಲಾ ರೀತಿಯ ಸಹಾಯ ಹಾಗೂ ಸಂರಕ್ಷಣೆ ನೀಡುವುದು ಯಸ್ರಿಬ್‌ನವರ ಕರ್ತವ್ಯವೆಂದು ಒಪ್ಪಂದದಲ್ಲಿ ಸ್ಪಷ್ಟಪಡಿಸಲಾಗಿತ್ತು.

ಮಕ್ಕಾದ ಜೀವನ ಮುಸ್ಲಿಮರಿಗೆ ಅಸಹನೀಯವಾಯಿತು. ವಿಶೇಷವಾಗಿ ಅವರೇನೂ ಅಪರಾಧ ಮಾಡಿರಲಿಲ್ಲ. ಅರಬರಿಗೆ ಅಪರಿಚಿತವಾದ ಒಂದು ಆದರ್ಶವನ್ನು ಅಂಗೀಕರಿಸಿರುವುದು ಮಾತ್ರ ಅವರ ಅಪರಾಧವಾಗಿತ್ತು. ಆದರೆ ಅವರು ಸ್ವಸಮೂಹದ ಭಾಷೆಯಲ್ಲಿ ಧಿಕ್ಕಾರಿಗಳು ಹಾಗೂ ಕುಲದೇವರುಗಳನ್ನು ನಿಷೇಧಿಸುವವರಾದರು. ತಮ್ಮ ವಿಶ್ವಾಸ ಆಚಾರಗಳನ್ನು ಪ್ರಶ್ನಿಸುವ, ಪೂರ್ವಿಕರ ನಂಬಿಕೆಯನ್ನು ತೆಗಳುವ ಅಹಂಕಾರಿಗಳಾದರು. ಅಲ್ಲದೆ ಪೂಜೆ ಪುರಸ್ಕಾರ ಮಾಡದ, ಅಧಿಕಾರವನ್ನು ಹಂಚಿಕೊಳ್ಳದೆ ಉದ್ಧಟತನ ತೋರಿಸುವವರಾಗಿ ಪರಿವರ್ತಿತರಾದರು. ಆದ್ದರಿಂದ ನವ ಮುಸ್ಲಿಮರಿಗೆ ಸಾಧ್ಯವಾದ ಎಲ್ಲಾ ಶಿಕ್ಷೆಯನ್ನು ನೀಡಲಾಯಿತು. ಹೊಸ ಧರ್ಮವನ್ನು ನಿರ್ನಾಮ ಮಾಡಲು ಹಾಗೂ ಅದರ ಅನುಯಾಯಿಗಳ ಹುಟ್ಟಡಗಿಸಲು ಸಾಧ್ಯವಿದ್ದಷ್ಟು ಪ್ರಯತ್ನಿಸಿದರು.

ಪ್ರವಾದಿ(ಸ) ಮತ್ತು ಸಂಗಾತಿಗಳು ಹಿಂಸೆಯನ್ನು ಅಸಾಧ್ಯವಾಗುವಷ್ಟು ಸಹಿಸಿದರು. ಶತ್ರುಗಳಿಂದ ತೀವ್ರ ಮರ್ದನದ ಸರಣಿಯನ್ನೇ ಅನುಭವಿಸಿದರು. ಅವರ ದೇಹವಿಡೀ ಶತ್ರುಗಳ ಹೊಡೆತದ ಗಾಯದ ಕಲೆಗಳು, ಚಾಟಿಯೇಟಿನ ಕುರುಹುಗಳು, ಕಾದ ಮರಳಿನಲ್ಲಿ ಎಳೆದಾಡಿದ ಗುರುತುಗಳು ಹಾಗೂ ಎದೆಯ ಮೇಲೆ ಬಂಡೆಕಲ್ಲನ್ನು ಇಟ್ಟಿದ್ದರಿಂದಾಗಿ ಉಂಟಾದ ಕಪ್ಪು ಕಲೆಗಳು, ಅಲ್ಲದೆ ಕೈಕಾಲುಗಳಲ್ಲಿ ಕಬ್ಬಿಣದ ಸರಳುಗಳಿಂದಾದ ಗಾಯದ ಹುಣ್ಣುಗಳು... ಒಂದೇ ಎರಡೇ........ ಆದರೂ ಅಕ್ರಮ-ಅನ್ಯಾಯಗಳು ಕೊನೆಗೊಳ್ಳಲಿಲ್ಲ. ಶತ್ರುಗಳ ಉಪಟಳ ಮುಂದುವರಿದಿದೆ. ಆದ್ದರಿಂದ ಪ್ರವಾದಿ(ಸ) ಮತ್ತು ಅನುಯಾಯಿಗಳು ಮರ್ದನದಿಂದ ಬಿಡುಗಡೆ ಬಯಸಿದರು. ಅದಕ್ಕಾಗಿ ಅಲ್ಲಾಹನೊಡನೆ ಪ್ರಾರ್ಥಿಸಿದರು. ಅವರಿಗೆ ಮದೀನಾಕ್ಕೆ ಹೋಗುವ ಹೊಸ ದಾರಿ ಗೋಚರಿಸಿತು. ಪ್ರವಾದಿವರ್ಯರು(ಸ) ಅನುಯಾಯಿಗಳಿಗೆ ಮದೀನಾಕ್ಕೆ ವಲಸೆ ಹೋಗುವಂತೆ ಆದೇಶಿಸಿದರು.

ಹುಟ್ಟಿ ಬೆಳೆದ ಊರಿಗೆ ವಿದಾಯ ಹೇಳುವ ಹಾಗೂ ಚಿಕ್ಕಂದಿನಿಂದ ತನ್ನ ಹೆಜ್ಜೆ ಗುರುತುಗಳಿಂದ ತುಂಬಿದ ಬತ್‌ವಾ ಕಣಿವೆಯನ್ನು ಬಿಟ್ಟು ಅಗಲುವುದನ್ನು ನೆನೆಸುವಾಗ ಬಿಲಾಲ್‌ರ ಹೃದಯ ಕಂಪಿಸಿತು. ಗತಕಾಲದ ಅನುಭವಗಳು ಸ್ಮೃತಿಪಟಲಗಳಲ್ಲಿ ಅಚ್ಚಳಿಯದೆ ಉಳಿದಿತ್ತು. ಅಲ್ಲಿನ ಖರ್ಜೂರದ ಮರಗಳು ಹಾಗೂ ಕಾಲು ದಾರಿಗಳು ಅವರ ಜೀವನದ ಅವಿಭಾಜ್ಯ ಅಂಗವಾಗಿತ್ತು. ಎಷ್ಟು ಕುಡಿದರೂ ಸಾಲದಂತಹ ಝುಂ ಝುಂ ನೀರನ್ನೂ ಸಾವಿರ ನೆರಳಿನ ತಂಪನ್ನು ನೀಡುವ ಕಅಬಾವನ್ನೂ ಅಗಲುವುದನ್ನು ಅವರಿಗೆ ಊಹಿಸುವುದೂ ಅವರಿಗೆ ಸಾಧ್ಯವಾಗಿರಲಿಲ್ಲ.

ಕಣ್ಣು ತೆರೆದಾಗಲೇ ಮಕ್ಕಾದ ಮರಳ ಕಣವನ್ನು ನೋಡಿದ್ದರು. ಅಲ್ಲಿನ ಗಾಳಿಯನ್ನೇ ಸೇವಿಸಿದ್ದರು. ಸುಪರಿಚಿತವಾಗಿದ್ದ ಮಾತೃಭೂಮಿಯ ಅಮೂಲ್ಯ ಕ್ಷಣಗಳನ್ನು ಮನ ದಿಂದ ತೆಗೆದು ಹಾಕುವುದು ಹೇಗೆ? ತನ್ನ ಜೀವನದ ಅವಿಭಾಜ್ಯ ಅಂಗವಾಗಿರುವ, ಈ ಪುಣ್ಯ

ಭೂಮಿಯಿಂದ ವಿದಾಯ ಹೇಳಬೇಕಾಗಿದೆಯೆಂದು ಯೋಚಿಸಿ ಅವರ ಅಂತರಂಗ ಬಿಕ್ಕಳಿಸಿತು. ಆದರೆ ಪ್ರವಾದಿವರ್ಯರ(ಸ) ಮಾತುಗಳು ಅವರಿಗೆ ಸಾಂತ್ವನ ನೀಡಿತು. ಅವರು ಹೇಳಿದರು: "ಅಲ್ಲಾಹನು ನಿಮಗೆ ಹಲವು ಸಹೋದರರನ್ನೂ ನಿಮ್ಮನ್ನು ರಕ್ಷಿಸಲು ಒಂದು ಅಭಯ ಕೇಂದ್ರವನ್ನೂ ನೀಡಿದ್ದಾನೆ. ಆದ್ದರಿಂದ ನೀವು ಸಂತೋಷದಿಂದ ಅಲ್ಲಿಗೆ ಹೋಗಿರಿ."

ಬಿಲಾಲ್(ರ) ಕೊನೆಯ ಬಾರಿಗೆ ಮಕ್ಕಾವನ್ನು ದಿಟ್ಟಿಸಿದರು. ಅಲ್ಲಿನ ದೃಶ್ಯಗಳನ್ನು ಕಣ್ತುಂಬಾ ನೋಡಿದರು. ಗಾಳಿಯನ್ನು ಸಾಧ್ಯವಾಗುವಷ್ಟು ಸೇವಿಸಿದರು. ನಡು ಮಧ್ಯಾಹ್ನದಲ್ಲಿ ಯಜಮಾನನ ಒಂಟೆಗಳನ್ನು ಮೇಯಿಸುತ್ತಿದ್ದ ದಿನಗಳಲ್ಲಿ ದಾಹಜಲವಾಗಿದ್ದ ಝಂ ಝಂ ನೀರನ್ನು ಎರಡು ಕೈಗಳಲ್ಲಿ ತುಂಬಿ ಹೊಟ್ಟೆ ತುಂಬಾ ಕುಡಿದರು. ಅಂಗಸ್ನಾನ ಮಾಡಿ ಪವಿತ್ರ ಕಅಬಾಕ್ಕೆ ಪ್ರದಕ್ಷಿಣೆ ಮಾಡಿದರು.

ಮಕ್ಕಾ ನಿವಾಸಿಗಳು ಗಾಢ ನಿದ್ರೆಯಲ್ಲಿದ್ದಾಗ ಯಸ್ರಿಬ್‌ಗೆ ಪ್ರಯಾಣ ಹೊರಟರು. ಶತ್ರುಗಳಿಗೆ ತಮ್ಮ ವಲಸೆಯ ವಿಷಯ ತಿಳಿದರೆ ತಡೆದು ಹಿಂಸೆಗೊಳಪಡಿಸುತ್ತಾರೆ. ಆದ್ದರಿಂದ ಮೌನವಾಗಿ, ಅಂಧಕಾರದಲ್ಲಿ ಮೆಲ್ಲಮೆಲ್ಲನೆ ಹೆಜ್ಜೆ ಹಾಕುತ್ತಾ ಹೊರಟರು. ಬಿಲಾಲ್‌ರೊಂದಿಗೆ ಸಅದ್ ಬಿನ್ ಅಬೀ ವಕ್ಕಾಸ್ ಹಾಗೂ ಅಮ್ಮಾರ್ ಬಿನ್ ಯಾಸಿರ್ ಕೂಡಾ ಇದ್ದರು.

ಮದೀನಾಕ್ಕೆ ತಲುಪಿದ ಮುಸ್ಲಿಮರನ್ನು ಮದೀನಾ ನಿವಾಸಿಗಳು ಆದರ ಪೂರ್ವಕವಾಗಿ ಬರಮಾಡಿಕೊಂಡರು. ತಮ್ಮ ಅವಶ್ಯಕತೆಯನ್ನು ಕಡೆಗಣಿಸಿ ಮುಹಾಜಿರರಿಗೆ ಆದ್ಯತೆ ನೀಡಿದರು. ಮೂಲಭೂತ ಅವಶ್ಯಕ ವಸ್ತುಗಳನ್ನೂ ಹಾಗೂ ತಮ್ಮ ಆಸ್ತಿಯನ್ನೂ ಹಂಚಿಕೊಂಡರು. ಮದೀನ ವಾಸಿಗಳು ಮಕ್ಕಾದ ಮುಸ್ಲಿಮರಿಗೆ ತೋರಿದ ಔದಾರ್ಯ ಇತಿಹಾಸದ ಪುಟಗಳಲ್ಲಿ ಸ್ವರ್ಣಾಕ್ಷರ ಗಳಿಂದ ಮುದ್ರಿತವಾಗಿದೆ. ಹಿಂಸೆ, ಕ್ರೂರ ಮರ್ದನಗಳಿಂದ ಬಿಡುಗಡೆ ಹೊಂದಿದ್ದಕ್ಕಾಗಿ ಅವರು ಬಹಳ ಸಂತೋಷಪಟ್ಟರು.

ಆದರೆ ಮದೀನಾಕ್ಕೆ ತಲುಪಿ ಹಲವಾರು ದಿನಗಳು ಕಳೆದರೂ ತಮ್ಮ ಪ್ರಿಯ ಪ್ರವಾದಿ ಆಗಮಿಸದಿದ್ದುದರಿಂದ ಅವರು ದುಃಖಿತರಾದರು. ಹನ್ನೆರಡು ವರ್ಷಗಳಿಂದ ಪ್ರವಾದಿಯ ವರನ್ನು ಅಗಲಿರದ ಬಿಲಾಲ್‌ರನ್ನು ವಿರಹ ವೇದನೆ ತೀವ್ರವಾಗಿ ಕಾಡಿತ್ತು. ಇಸ್ಲಾಮ್ ಸ್ವೀಕರಿಸಿದಂದಿನಿಂದ ಅವರಿಗೆ ಪ್ರವಾದಿಯವರಿಂದ(ಸ) ದೂರವಿರಬೇಕಾಗಿ ಬಂದಿರಲಿಲ್ಲ. ಎಲ್ಲಾ ದಿನವೂ ಅವರು ಮಕ್ಕಾದ ಕಡೆಗೆ ಕಣ್ಣು ಹಾಯಿಸುತ್ತಿದ್ದರು. ಹೀಗಿರುವಾಗ ಒಂದು ದಿನ ಅವರ ಕರ್ಣ ಪಟಲಗಳಲ್ಲಿ ಸುಂದರ ಗಾನಗಳು ಬಂದು ಅಪ್ಪಳಿಸಿದವು. ಮದೀನಾಕ್ಕೆ ಆಗಮಿಸಿದ ಸಂದೇಶವಾಹಕರನ್ನು ಜನರು ಸಂತೋಷದಿಂದ ಸ್ವಾಗತಿಸುತ್ತಿದ್ದರು. ಅಂದು ಅವರ ಆನಂದವನ್ನು ವರ್ಣಿಸಲು ಅಸಾಧ್ಯವಾಗಿತ್ತು. ಅವರೆಲ್ಲರೂ ಪ್ರವಾದಿವರ್ಯರನ್ನು ಕಾಣಲು, ಅವರ ಧ್ವನಿಯನ್ನು ಆಲಿಸಲು, ಅತ್ಯಂತ ಉತ್ಸುಕರಾಗಿದ್ದರು. ಅವರಲ್ಲಿ ಹೆಚ್ಚಿನವರು ಪ್ರವಾದಿಯವರ(ಸ) ಮನೋದಾರ್ಢ್ಯ ಹಾಗೂ ವಾಕ್ಚಾತುರ್ಯದ ಬಗ್ಗೆ ಕೇಳಿದ್ದರೂ ಆ

ಮಹಾ ಪುರುಷನನ್ನು ಕಣ್ಣಿಂದ ನೋಡಿರಲಿಲ್ಲ, ಪ್ರವಾದಿಯವರನ್ನು ಆತ್ಮೀಯವಾಗಿ ಪ್ರೀತಿಸುತ್ತಿದ್ದ ಹಾಗೂ ಇಸ್ಲಾಮನ್ನು ಪ್ರಾಮಾಣಿಕವಾಗಿ ಸ್ವೀಕರಿಸಿದ್ದ ಸಂಗಾತಿಗಳಿಂದ ಅವರು ಸಂದೇಶವಾಹಕರನ್ನು ಕಾಣದೆಯೇ ಇಸ್ಲಾಮ್ ಸ್ವೀಕರಿಸಿದ್ದರು. ಆದ್ದರಿಂದ ಆ ದೇವದೂತನನ್ನು ಕಣ್ಣಾರೆ ಕಾಣಲು ಅವರು ತವಕಿಸುತ್ತಿದ್ದರು.

ಬಿಲಾಲ್‌ರು ಝೈದ್ ಬಿನ್ ಹೈಸಮ್‌ರ ಅತಿಥಿಯಾಗಿದ್ದರು. ಅವರೊಂದಿಗಿನ ಜೀವನದಿಂದ ಬಿಲಾಲ್ ಸಂತೃಪ್ತರಾಗಿದ್ದರು. ಆದರೆ ಯಸ್ರಿಬ್‌ನಲ್ಲಿ ಸಾಂಕ್ರಾಮಿಕ ಜ್ವರ ವ್ಯಾಪಕವಾದಾಗ ಬಿಲಾಲ್‌ರೂ ರೋಗಪೀಡಿತರಾದರು. ಆ ಸಂದರ್ಭದಲ್ಲಿ ಅರೆ ಪ್ರಜ್ಞಾವಸ್ಥೆಯಲ್ಲಿ ಅವರು ಹಾಡಿದ ಹಾಡುಗಳು ಮಕ್ಕಾ ಜೀವನಕ್ಕೆ ಸಂಬಂಧಿಸಿದವುಗಳಾಗಿದ್ದವು. ಜ್ವರ ಬಾಧಿತರಾಗಿ ಅವರು ಹಾಡಿದರು: ಸಸ್ಯಶಾಮಲವಾದ ಮಕ್ಕಾದ ಕಣಿವೆಯಲ್ಲಿ ಒಂದು ದಿನ ಕಳೆಯುವ ಅವಕಾಶ ದೊರೆತಿದ್ದರೆ! ಅಲ್ಲಿ ಅದ್‌ಖರ್ ಮತ್ತು ಜಲೀಲ್ ಎಂಬ ಹುಲ್ಲು ಬೆಳೆಯುತ್ತದೆ. ಅಲ್ಲಿನ ಮಜ್ನಾ ಎಂಬ ಚಿಲುಮೆಯ ನೀರು ಕುಡಿಯಲು ಶಾಮ ಮತ್ತು ತುಫೈಲ್ ಎಂಬ ಪರ್ವತಗಳ ದೃಶ್ಯ ನೋಡಲು ಮನಸ್ಸು ಹಾತೊರೆಯುತ್ತಿದೆ.

ಗತಕಾಲದ ನೆನಪುಗಳು ಹಾಗೂ ಬತ್‌ವಾ ಕಣಿವೆಯೊಂದಿಗಿನ ಪ್ರೀತಿ ಅವರ ಕವನದಲ್ಲಿ ವ್ಯಕ್ತವಾಗುತ್ತಿದೆ. ಅವು ಗುಲಾಮಗಿರಿಯ ಅತ್ಯಂತ ಶೋಚನೀಯ ದಿನಗಳನ್ನು ಅನುಭವಿಸಿದ ಸ್ಥಳವಾಗಿದ್ದರೂ, ಅವರಿಗೆ ಇಸ್ಲಾಮಿನ ಮುಕ್ತಿಯ ಹಾದಿಯನ್ನು ತೋರಿಸಿದ ಪುಣ್ಯಭೂಮಿಯೂ ಅದುವೇ ಆಗಿತ್ತು. ಜನ್ಮಭೂಮಿಯ ಮೇಲಿನ ಪ್ರೀತಿ ಇಲ್ಲದವರು ಇರಲಾರರು. ನಡೆದಾಡಲು ಕಲಿತ ಹಾಗೂ ಕ್ಷೇಮ ಸಮಾಚಾರಗಳೊಂದಿಗೆ ಪ್ರೀತಿಯನ್ನು ವ್ಯಕ್ತಪಡಿಸಿದ ಆ ಮಣ್ಣನ್ನು, ಬೆಟ್ಟ-ಕಣಿವೆಗಳನ್ನು, ಹರಿಯುವ ತೊರೆಗಳನ್ನು ಹೇಗೆ ಮರೆಯಲು ಸಾಧ್ಯ? ತನ್ನ ಶೈಶವ, ಬಾಲ್ಯ, ಯೌವನಕ್ಕೆ ಸಾಕ್ಷಿಯಾದ ಆ ಭೂಮಿಯ ನೆನಪುಗಳು ಮಧುರ ಮನೋಹರವಾಗಿದೆ.

ಬಿಲಾಲ್‌ರ ರೋಗದ ಬಗ್ಗೆ ತಿಳಿದ ಪ್ರವಾದಿವರ್ಯರು(ಸ) ಪ್ರಾರ್ಥಿಸಿದರು: 'ದೇವಾ! ನೀನು ಬಿಲಾಲ್‌ರ ರೋಗವನ್ನು ಗುಣಪಡಿಸು! ಮಕ್ಕಾದಂತೆಯೇ ಮದೀನವನ್ನು ನಮಗೆ ಪ್ರಿಯವಾದ ಹಾಗೂ ಯೋಗ್ಯವಾದ ದೇಶವನ್ನಾಗಿ ಮಾಡು!'

ಬಿಲಾಲ್ ಬೇಗನೇ ಗುಣಮುಖರಾದರು. ಆಗ ಪ್ರವಾದಿವರ್ಯರು(ಸ) ಅನ್ಸಾರ್ ಮತ್ತು ಮುಹಾಜಿರ್‌ಗಳ ಮಧ್ಯೆ ಸಹೋದರ ಸಂಬಂಧವನ್ನು ಆರಂಭಿಸಿದ್ದರು. ಅಂದರೆ ವಾರೀಸು ಸೊತ್ತು ಹಾಗೂ ಇತರ ಎಲ್ಲ ವಿಷಯಗಳಲ್ಲೂ ರಕ್ತ ಸಂಬಂಧ ಅಥವಾ ಕುಟುಂಬ ಸಂಬಂಧದ ನಿಯಮವನ್ನು ಜಾರಿಗೊಳಿಸಿದರು. ಮಕ್ಕಾದಿಂದ ಮದೀನಾಕ್ಕೆ ವಲಸೆ ಬಂದವರನ್ನು ಮುಹಾಜಿರ್‌ಗಳೆನ್ನಲಾಗುತ್ತದೆ. ಅವರನ್ನು ಸ್ವಾಗತಿಸಿ, ಸಹಾಯ ಮಾಡಿದ ಮದೀನವಾಸಿಗಳನ್ನು ಅನ್ಸಾರಿಗಳು ಎನ್ನಲಾಗುತ್ತದೆ. ಬಿಲಾಲ್‌ರಿಗೆ ಸಹೋದರರಾಗಿ ದೊರೆತ ವ್ಯಕ್ತಿ ಅಬೂರುಹೈಫ ಆಗಿದ್ದರು. ಅದು ಅತ್ಯಂತ ಆದರ್ಶ ಸಂಬಂಧವಾಗಿತ್ತು.

ಹೀಗೆ ಬಿಲಾಲ್ ಮತ್ತು ಸಂಗಡಿಗರು ಯಸ್ರಿಬ್‌ನಲ್ಲಿದ್ದಾರೆ. ಆದರೆ ಈಗ ಯಸ್ರಿಬ್‌ಗೆ ಮದೀನ ಎಂದು ನಾಮಕರಣ ಮಾಡಲಾಯಿತು. ಪ್ರವಾದಿಗಳ ಪಟ್ಟಣವೆಂದು ಇದರ ಅರ್ಥ. ಇದು ಮಕ್ಕಾದಿಂದ 450 ಕಿ.ಮೀ. ದೂರದಲ್ಲಿದೆ.

ಹಿಜ್ರತ್(ವಲಸೆ) ಇದೊಂದು ಇತಿಹಾಸದ ಮಹತ್ತರವಾದ ಘಟನೆ. ಅದು ಒಂದು ಹೊಸ ಯುಗಕ್ಕೆ ನಾಂದಿಯಾಯಿತು. ಅದು ಮುಸ್ಲಿಮರಿಗೆ ಸ್ವಾತಂತ್ರ್ಯ ಲಭಿಸಿದ ಗಳಿಗೆಯಾಗಿತ್ತು. ಶತ್ರುಗಳ ಅಪಹಾಸ್ಯ, ಪೀಡನೆ ಹಾಗೂ ವಿರೋಧಿಗಳ ಅಕ್ರಮ ಮರ್ದನಗಳು ಅಂತ್ಯಗೊಂಡ ದಿನಗಳಾಗಿದ್ದವು. ಅಲ್ಲದೆ ಇನ್ನೊಂದು ಯುಗದ ಆರಂಭವೂ ಆಗಿತ್ತು. ದುರ್ಬಲರ ಧ್ವನಿಯು ಆಲಿಸಲ್ಪಡುವ, ಶೋಷಿತರ ಅಹವಾಲುಗಳಿಗೆ ಸ್ಪಂದಿಸುವಂತಹ ಇಸ್ಲಾಮೀ ರಾಷ್ಟ್ರ ನಿರ್ಮಾಣವಾಗಬೇಕಾಗಿದೆ. ಆದ್ದರಿಂದಲೇ ಮದೀನಾ ವಿಮೋಚನೆಯ ಮಹಾನ್ ಪ್ರತೀಕವಾಗಿದೆ. ವಿಶೇಷವಾಗಿ ಬಿಲಾಲ್‌ರಂತಹ ದುರ್ಬಲರ ಕನಸುಗಳು ನನಸಾದ ಸುವರ್ಣ ಭೂಮಿಯಾಗಿದೆ.

ತನ್ನ ಮುಂದಿನ ಮಹಾನ್ ಗುರಿಯ ಚಿಂತೆ ಹಾಗೂ ಘನ ಜವಾಬ್ದಾರಿಯ ಪ್ರಜ್ಞೆಯು ಬಿಲಾಲ್ ಹಾಗೂ ಸಂಗಡಿಗರನ್ನು ಕ್ರಿಯಾಶೀಲಗೊಳಿಸಿತು. ಹೊಸ ರಾಷ್ಟ್ರದ ಸ್ಥಾಪನೆ ಹಾಗೂ ನವಸಮೂಹದ ಸೃಷ್ಟಿಗಾಗಿ ಅವರು ಅವಿರತವಾಗಿ ಪ್ರಯತ್ನಿಸಿದರು.

# ಅಲ್ಲಾಹು ಅಕ್ಬರ್

'ನಮಾಝ್‌ನ ಸಮಯವಾಗುವಾಗ ನಾವು ಒಂದು ಧ್ವಜವನ್ನು ಎತ್ತಿ ಹಿಡಿಯೋಣ. ಆಗ ಜನರಿಗೆ ನಮಾಝ್‌ನ ಸಮಯ ತಿಳಿಯಬಹುದು' ಓರ್ವ ಸಹಾಬಿಯವರು ಹೇಳಿದರು.

ಮದೀನದ ಹೊಸ ಮಸೀದಿಯಲ್ಲಿ ಅವರೆಲ್ಲರೂ ಸೇರಿದ್ದರು. ಮಸೀದಿಯ ನಿರ್ಮಾಣ ಕಾರ್ಯ ಪೂರ್ತಿಗೊಂಡಾಗ ಜನರು ಮಸೀದಿಯಲ್ಲಿ ಒಟ್ಟುಗೂಡಿದರು. ಆದರೆ ನಮಾಝ್‌ನ ಸಮಯವನ್ನು ಜನರಿಗೆ ತಿಳಿಯಪಡಿಸುವ ಯಾವ ವಿಧಾನವೂ ಅವರಿಗೆ ತಿಳಿದಿರಲಿಲ್ಲ. ಆದ್ದರಿಂದ ಪ್ರವಾದಿವರ್ಯರು(ಸ) ಸಂಗಾತಿಗಳೊಂದಿಗೆ ಸಮಾಲೋಚನೆ ನಡೆಸಿದರು. ಅಂತಹ ವ್ಯವಸ್ಥೆಯ ಅನಿವಾರ್ಯತೆ ಅವರಿಗೆ ಮನವರಿಕೆಯಾಗಿತ್ತು. ಆದ್ದರಿಂದ ಎಲ್ಲರೂ ಒಂದೊಂದು ರೀತಿಯ ಸಲಹೆ ನೀಡುತ್ತಿದ್ದರು.

'ನಾವು ಬೆಂಕಿ ಹೊತ್ತಿಸೋಣ. ಅದನ್ನು ಕಂಡು ಎಲ್ಲರೂ ಬರಲಿ' ಇನ್ನೋರ್ವರ ಸಲಹೆ. ಅದು ಯಾರಿಗೂ ಹಿಡಿಸಲಿಲ್ಲ.

'ಅದು ಮಜೂಸಿಗಳ ಸಂಪ್ರದಾಯವಾಗಿದೆ' ಪ್ರವಾದಿ(ಸ) ಹೇಳಿದರು.

'ಶಂಖ ಊದೋಣ?' ಮೂರನೆಯ ಅಭಿಪ್ರಾಯ ಬಂತು.

'ಅದು ಯಹೂದಿಗಳ ಆಚಾರವಾಗಿದೆ.' ಪ್ರವಾದಿ(ಸ) ಹೇಳಿದರು.

'ಹಾಗಾದರೆ ಗಂಟೆ ಬಾರಿಸೋಣ.' ಇನ್ನೋರ್ವ ಸಹಾಬಿ ಹೇಳಿದರು.

ಸಂದೇಶವಾಹಕರಿಗೆ ಅದು ಕೂಡಾ ಇಷ್ಟವಾಗಲಿಲ್ಲ. 'ಅದು ಕ್ರೈಸ್ತರ ವಿಧಾನವಾಗಿದೆ.' ಸಮಾಲೋಚನೆ ಮುಂದುವರಿಯಿತು. ಬೇರೆ ಉಪಾಯ ಕಾಣದೆ ತಾತ್ಕಾಲಿಕವಾಗಿ ಗಂಟೆ ಬಾರಿಸುವುದೆಂದು ತೀರ್ಮಾನಿಸಲಾಯಿತು. ಆದರೆ ಪ್ರವಾದಿವರ್ಯರಿಗೆ(ಸ) ಇದರಿಂದ ತೃಪ್ತಿಯಾಗಿರಲಿಲ್ಲ. ಆದರೂ ಗಂಟೆ ಬಾರಿಸಲು ಬೇಕಾದ ಸಿದ್ಧತೆಯನ್ನು ಮಾಡಲಾಯಿತು.

ಮರುದಿನ ಮುಂಜಾನೆ ಅಬ್ದುಲ್ಲಾ ಬಿನ್ ಝೈದ್ ಪ್ರವಾದಿಯವರ(ಸ) ಬಳಿಗೆ ಬಂದರು. ಅವರ ಮುಖ ಪ್ರಸನ್ನವಾಗಿತ್ತು. ಅವರು ರಾತ್ರಿ ಕಂಡ ಕನಸನ್ನು ಪ್ರವಾದಿಯವರ(ಸ) ಬಳಿ ವಿವರಿಸಲಾರಂಭಿಸಿದರು.

'ನಾನು ಅರ್ಧ ನಿದ್ದೆಯಲ್ಲಿದ್ದೆ. ಹಸಿರು ಉಡುಪು ಧರಿಸಿದ ಓರ್ವ ವ್ಯಕ್ತಿ ನನ್ನ ಬಳಿಗೆ ಬಂದರು. ಅವರ ಕೈಯಲ್ಲಿ ಒಂದು ಗಂಟೆಯಿತ್ತು. ಇದನ್ನು ನೀವು ಮಾರುವಿರಾ?' ಎಂದು ನಾನು ಪ್ರಶ್ನಿಸಿದೆ.

ಆಗಂತುಕ 'ಏಕೆ?' ಎಂದು ಪ್ರಶ್ನಿಸಿದರು.

'ಜನರನ್ನು ನಮಾಝ್‌ಗೆ ಆಹ್ವಾನಿಸಲು ಅದು ಅಗತ್ಯವಿದೆ' ನಾನು ಹೇಳಿದೆ.

'ಅದಕ್ಕಿಂತಲೂ ಉತ್ತಮ ವಿಧಾನವನ್ನು ನಾನು ತೋರಿಸಿಕೊಡಲೇ?' ಆತ ಪ್ರಶ್ನಿಸಿದ.

'ಅದು ಯಾವ ವಿಧಾನ?'

'ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್, ಲಾ ಇಲಾಹ ಇಲ್ಲಲ್ಲಾಹ್... ಎಂದು ಗಟ್ಟಿಯಾದ ಧ್ವನಿಯಲ್ಲಿ ಕೂಗಿ ಕರೆಯುವುದು.'

ಅಬ್ದುಲ್ಲಾರ ಮಾತು ಕೇಳಿ ಪ್ರವಾದಿವರ್ಯರ(ಸ) ಮುಖ ಸಂತೋಷದಿಂದ ಅರಳಿತು. ಹೀಗೆ ನಮಾಝ್‌ಗೆ ಆಹ್ವಾನಿಸಲು ಹೊಸ ವಿಧಾನವೊಂದು ತಿಳಿಯಿತು. ಯಾವುದೇ ಅನುಕರಣೆಯ ವಾಂಛೆಯೂ ಅನ್ಯ ಆಚಾರಗಳ ನಕಲೂ ಅಲ್ಲದ, ಅತ್ಯಂತ ವಿನೂತನ ಶೈಲಿ. ಅರ್ಥಪೂರ್ಣವಾದ ಈ ವಚನಗಳು ಆರಾಧನೆಯೊಂದಿಗೆ ಸಂಬಂಧವನ್ನೂ ಹೊಂದಿದೆ. ನಮಗೆ ಮಾನವ ನೀಡುವ ಈ ಕರೆಯೇ ಉತ್ತಮ.

ಆ ಕರೆಗಾಗಿ ಯಾರ ಸ್ವರ ಉತ್ತಮ ಎಂಬ–ಬಗ್ಗೆ ಪ್ರವಾದಿಯವರಿಗೆ(ಸ) ಸಂಶಯವಿರಲಿಲ್ಲ. ಅದಕ್ಕೆ ಸಾಟಿಯಾದ ಧ್ವನಿ ಬಿಲಾಲ್‌ರದ್ದು(ರ) ಮಾತ್ರವಾಗಿತ್ತು. ಕರಿಯ ಗುಲಾಮನ ಸ್ವರ! ಕಾದ ಮರಳ ಮೇಲೆ ಎಳೆದಾಡಲ್ಪಡುತ್ತಿರುವಾಗ 'ಅಹದ್' ಎಂದೇ ಉಚ್ಚರಿಸಿದ ಆ ನಾಲಗೆಯಿಂದ ಬರುವ ಶಬ್ದ. ದೇವನ ನಾಮವನ್ನು ಉಚ್ಚರಿಸಿದ್ದರಿಂದ ಕಿರಾತ ಮರ್ದನಗಳಿಗೆ ಗುರಿಯಾದ ಬಿಲಾಲ್‌ರಿಗಿಂತ(ರ) ಸೂಕ್ತ ವ್ಯಕ್ತಿ ಯಾರೂ ಇಲ್ಲ. ಪ್ರವಾದಿವರ್ಯರ(ಸ) ತೀರ್ಮಾನವನ್ನು ಎಲ್ಲರೂ ಒಪ್ಪಿದರು.

ಮಸೀದಿಯ ಮೇಲೆ ಹತ್ತಿ ಬಿಲಾಲ್ ಆಕರ್ಷಕವಾಗಿ, ಮನಮೋಹಕ ಸ್ವರದಲ್ಲಿ ಘೋಷಿಸಿದರು.

"ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್,
ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್,
ಅಶ್ಹದು ಅಲ್ಲಾ ಇಲಾಹ ಇಲ್ಲಲ್ಲಾಹ್,
ಅಶ್ಹದು ಅಲ್ಲಾ ಇಲಾಹ ಇಲ್ಲಲ್ಲಾಹ್,
ಅಶ್ಹದು ಅನ್ನ ಮುಹಮ್ಮದರ್‌ರಸೂಲುಲ್ಲಾಹ್,
ಅಶ್ಹದು ಅನ್ನ ಮುಹಮ್ಮದರ್‌ರಸೂಲುಲ್ಲಾಹ್,
ಹಯ್ಯ ಅಲಸ್ಸಲಾತ್, ಹಯ್ಯ ಅಲಸ್ಸಲಾತ್
ಹಯ್ಯ ಅಲಲ್ ಫಲಾಹ್, ಹಯ್ಯ ಅಲಲ್ ಫಲಾಹ್,

ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್,
ಲಾ ಇಲಾಹ ಇಲ್ಲಲ್ಲಾಹ್."
ಅರ್ಥ:
"ಅಲ್ಲಾಹನು ಅತ್ಯಂತ ಮಹಾನನು, ಅಲ್ಲಾಹನು ಅತ್ಯಂತ ಮಹಾನನು,
ಅಲ್ಲಾಹನು ಅತ್ಯಂತ ಮಹಾನನು, ಅಲ್ಲಾಹನು ಅತ್ಯಂತ ಮಹಾನನು,
ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ,
ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ,
ಮುಹಮ್ಮದ್ ದೇವ ಸಂದೇಶವಾಹಕರಾಗಿದ್ದಾರೆಂದು ನಾನು ಸಾಕ್ಷ್ಯ ವಹಿಸುತ್ತೇನೆ,
ಮುಹಮ್ಮದ್ ದೇವ ಸಂದೇಶವಾಹಕರಾಗಿದ್ದಾರೆಂದು ನಾನು ಸಾಕ್ಷ್ಯ ವಹಿಸುತ್ತೇನೆ,
ಬನ್ನಿ ನಮಾಝಿನೆಡೆಗೆ, ಬನ್ನಿ ನಮಾಝಿನೆಡೆಗೆ,
ಬನ್ನಿ ವಿಜಯದೆಡೆಗೆ, ಬನ್ನಿ ವಿಜಯದೆಡೆಗೆ,
ಅಲ್ಲಾಹನು ಅತ್ಯಂತ ಮಹಾನನು, ಅಲ್ಲಾಹನು ಅತ್ಯಂತ ಮಹಾನನು,
ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ"

ಬಿಲಾಲ್‌ರ(ರ) ಶಬ್ದ ಮದೀನದೆಲ್ಲೆಡೆ ಮೊಳಗಿತು. ವಿಶ್ವಾಸಿಗಳ ಮನದಲ್ಲಿ ಪ್ರತಿಧ್ವನಿಸಿತು. ಅವರೆಲ್ಲರೂ ಮಸೀದಿಯ ಕಡೆಗೆ ಧಾವಿಸಿದರು. ಆ ಗುಂಪಿನಲ್ಲಿ ಉಮರುಲ್ ಫಾರೂಕ್(ರ) ಕೂಡಾ ಇದ್ದರು. ಅದಾನಿನ ಕರೆ ಅವರನ್ನು ಅಚ್ಚರಿಗೊಳಿಸಿತು. ಕಾರಣವೇನೆಂದರೆ ಅಬ್ದುಲ್ಲಾ ಬಿನ್ ಝೈದ್‌ರಿಗೆ(ರ) ಕಂಡ ಅದೇ ಕನಸು ಅವರಿಗೂ ಕಂಡಿತ್ತು. ಅವರು ಬಂದ ತಕ್ಷಣ ಪ್ರವಾದಿವರ್ಯರಿಗೆ(ಸ) ಈ ವಿಷಯ ತಿಳಿಸಿದರು.

ಎಂತಹ ಮಹತ್ವಪೂರ್ಣ ಕರೆ! ಸತ್ಯವಿಶ್ವಾಸಿಗಳನ್ನು ಪ್ರವಾದಿಯ ಮಸೀದಿಗೆ ಆಮಂತ್ರಿಸುವ ಕರೆ! ಈ ಕರೆಗೆ ಸ್ಪಂದಿಸಿ, ಎಲ್ಲರೂ ತಮ್ಮ ಕೆಲಸ ಕಾರ್ಯಗಳನ್ನು ನಿಲ್ಲಿಸಿ ಮಸೀದಿಗೆ ಹೊರಡುವುದು. ಇದಕ್ಕಿಂತ ಉತ್ತಮವಾದ ವಿಧಾನ ಬೇರೆ ಇರಲು ಸಾಧ್ಯವಿಲ್ಲ, ಗುಲಾಮಗಿರಿಯ ಹಚ್ಚೆಗಳು ಚಾಟಿಯೇಟಿನ ಗಾಯಗಳನ್ನು ಹೊತ್ತು ನಡೆಯುತ್ತಿದ್ದಂತಹ ಬಿಲಾಲ್‌ರಿಗೆ ಈ ಅಪೂರ್ವ ಸೌಭಾಗ್ಯ ಲಭಿಸಿತು.

ಮಾನವ ಇತಿಹಾಸದಲ್ಲೇ ಪ್ರಪ್ರಥಮವಾಗಿ ಅದಾನ್ ಕರೆಯನ್ನು ನೀಡಿದ ವ್ಯಕ್ತಿ ಹಝ್ರತ್ ಬಿಲಾಲ್(ರ) ಆಗಿದ್ದಾರೆ. ಅದರ ನಂತರ ಇಂದಿನ ವರೆಗೆ ದಿನಕ್ಕೆ ಐದು ಬಾರಿ ಆ ಶಬ್ದ ಅಂತರಿಕ್ಷದಲ್ಲಿ ಮೊಳಗುತ್ತಲೇ ಇದೆ. ಲೋಕಾಂತ್ಯದ ವರೆಗೂ ಇದು ಮೊಳಗುತ್ತಲೇ ಇರುವುದು. ಇಸ್ಲಾಮ್‌ನ ಅನುಯಾಯಿಗಳು ಇರುವಲ್ಲೆಲ್ಲಾ ಅದು ಉಚ್ಚಸ್ವರದಲ್ಲಿ ಕೇಳಿಸುತ್ತಲೇ ಇರುತ್ತದೆ. ಹೀಗೆ ಶತಮಾನಗಳ ವರೆಗೆ ಕೋಟ್ಯಾನುಕೋಟಿ ಜನತೆಗೆ ಅದಾನ್ ಕರೆಯನ್ನು ಹೇಳಿ ಕೊಡುವ ಮೂಲಕ ನೀಗ್ರೋ ಗುಲಾಮ ಬಿಲಾಲ್(ರ) ಅಜರಾಮರರಾದರು. ಅದು ಮದೀನದಲ್ಲಿ ಮೊಳಗಿದ ಆ ಶಬ್ದ ನಮ್ಮ ಕರ್ಣ ಪಟಲಗಳಿಗೆ ಅಲೆ ಅಲೆಯಾಗಿ ತಲುಪುತ್ತಿದೆ.

ಬಿಲಾಲ್‌ರಿಗೆ(ರ) ಅದಾನಿನ ಕರೆಯು ಪ್ರವಾದಿ ಪ್ರೇಮದ ಪ್ರತೀಕವಾಗಿತ್ತು. ಅವರು ಪ್ರವಾದಿಯವರ(ಸ) ನಾಮವನ್ನು ಉಚ್ಚರಿಸುವಾಗ ಶ್ರೋತೃಗಳು ಕೂಡಾ ಮಂತ್ರ ಮುಗ್ಧರಾಗುತ್ತಿದ್ದರು. ನಮಾಝ್‌ನ ಸಮಯವಾಗುವಾಗ ದೇವ ಪ್ರವಾದಿಯವರು(ಸ) ಬಿಲಾಲ್‌ರಿಗೆ(ರ) ಅದಾನಿನ ವಿವರಣೆಯನ್ನು ನೀಡುತ್ತಿದ್ದರು. ಬಿಲಾಲ್‌ರು(ರ) ಅದರಂತೆ ಅದಾನ್ ಕೊಡುತ್ತಿದ್ದರು.

ಪ್ರಭಾತ ನಮಾಝ್‌ಗೆ ಸಮಯವಾಗುವುದಕ್ಕಿಂತ ಮೊದಲೇ ಪ್ರವಾದಿವರ್ಯರು(ಸ) ಹಾಜರಾಗುತ್ತಿದ್ದರು. ಒಂದು ದಿನ ಯಾವುದೋ ಕಾರಣದಿಂದ ಅವರು ಬಂದಿರಲಿಲ್ಲ. ಆಗ ಬಿಲಾಲ್‌ರು(ರ) 'ನಮಾಝ್ ನಿದ್ದೆಗಿಂತಲೂ ಉತ್ತಮ' ಎಂಬ ವಾಕ್ಯವನ್ನು ಅದಾನಿನ ಕರೆಗೆ ಸೇರಿಸಿದರು. ಪ್ರವಾದಿವರ್ಯರಿಗೆ(ಸ) ಈ ವಾಕ್ಯ ಬಹಳ ಹಿಡಿಸಿತು. ಬಳಿಕ ಪ್ರಭಾತದ ಅದಾನಿನಲ್ಲಿ ಆ ವಾಕ್ಯವನ್ನು ಸೇರಿಸುವಂತೆ ಸೂಚಿಸಿದರು. ಅಲ್ಲಾಹನು ಬಿಲಾಲ್‌ರ(ರ) ನಾಲಗೆಯಿಂದ ಇಂತಹ ಮಹತ್ವಪೂರ್ಣ ವಾಕ್ಯವನ್ನು ಜಗತ್ತಿಗೆ ಪರಿಚಯಿಸಿದನು.

ಆಬಾಲ ವೃದ್ಧರೆನ್ನದೆ ಎಲ್ಲರೂ ಬಿಲಾಲ್‌ರ ಶಬ್ದವನ್ನು ಅನುಕರಿಸಲು ಪ್ರಯತ್ನಿಸುತ್ತಿದ್ದರು. ಆದರೆ ದೇವದತ್ತವಾಗಿ ಲಭಿಸಿದಂತಹ ಸ್ವರ ಮಾಧುರ್ಯ ಇತರರಿಗೆ ಹೇಗೆ ಬರಲು ಸಾಧ್ಯ?

ಎಂತಹ ಮಹತ್ತರವಾದ ಪರಿವರ್ತನೆ? ಯಜಮಾನನಿಗೆ ನಿದ್ದೆ ಬಾರದ ಸಂದರ್ಭದಲ್ಲಿ ಆತನನ್ನು ಹಾಗೂ ಆತನ ಪತ್ನಿಯನ್ನು ಖುಷಿಗೊಳಿಸಲು ಹಾಡುತ್ತಿದ್ದ ವ್ಯಕ್ತಿ ಪ್ರವಾದಿಯ ಮಸೀದಿಯಿಂದ ಸೃಷ್ಟಿಕರ್ತನ ಮಹಾನತೆಯನ್ನು ಘೋಷಿಸುತ್ತಿದ್ದಾರೆ. ಬತ್‌ವಾ ಕಣಿವೆಯಲ್ಲಿ ಒಂಟೆಯ ಕಾರವಾನದ ಹಿಂದೆ ಹಾಡುತ್ತಾ ನಡೆದಿದ್ದ ಆ ಗುಲಾಮ ಬಾಲಕ ಇಂದು ಮದೀನಾದ ಉನ್ನತ ಸ್ಥಾನವನ್ನು ಅಲಂಕರಿಸಿದ್ದಾರೆ. ಕುರೈಶ್ ಗಣ್ಯರಿಗೆ ಹೆದರಿ, ನಿರ್ಲಿಪ್ತನಾಗಿ ತನ್ನ ಸಮ್ಮೋಹನಗೊಳಿಸುವ ಗಾನವನ್ನು ಪ್ರವಹಿಸುತ್ತಿದ್ದ ನೀಗ್ರೋ ಈಗ ದೇವಸಂಪ್ರೀತಿ ಹಾಗೂ ಪ್ರವಾದಿ ಪ್ರೇಮದಿಂದ ಅನಶ್ವರವಾದ ಸತ್ಯವನ್ನು ಘೋಷಿಸಿ, ವಿಶ್ವಾಸಿಗಳನ್ನು ಹರ್ಷಪುಳಕಿತಗೊಳಿಸಿ ಕಣ್ಮಣಿಯಾದರು.

ಅದಾನ್ ಕರೆಯು ಮಾನವನ ವಿಮೋಚನೆಯ ಘೋಷಣೆಯಾಗಿದೆ. ದೇವನ ಹೊರತು ಎಲ್ಲಾ ದಾಸ್ಯ ಹಾಗೂ ಅಧಿಕಾರದ ನಿರಾಕರಣೆಯಾಗಿದೆ. ಅಹಂಕಾರಿಗಳು ಹಾಗೂ ಧಿಕ್ಕಾರಿಗಳನ್ನು ನಡುಗಿಸುವ ಕ್ರಾಂತಿಕಾರಿ ವಾಕ್ಯವಾಗಿದೆ. ಸರ್ವಾಧಿಕಾರಿ ಮತ್ತು ಸ್ವೇಚ್ಛಾಧಿಪತಿಗಳ ಸುಖ ನಿದ್ದೆಯನ್ನು ಹೊಡೆದೋಡಿಸಿದ ಉಜ್ವಲ ವಾಣಿಗಳು! ಅಧಿಕಾರಿಗಳ ಹಾಗೂ ಯಜಮಾನರ ದರ್ಪವನ್ನು ಅಪಹಾಸ್ಯಗೊಳಿಸುವ ಘೋಷಣೆಯಿದು. ದೇಹೇಚ್ಛೆಯನ್ನು ಬದಿಗಿರಿಸಿ ಸರ್ವಶಕ್ತನ ಮುಂದೆ ತನ್ನನ್ನು ಅರ್ಪಿಸುವ ಕ್ಷಣವೂ ಹೌದು. ದೇವೇತರ ಶಕ್ತಿಗಳ ದಾಸ್ಯದ ನಿರಾಕರಣೆಯ ಘೋಷಣೆ ಕೂಗಲು ಬಿಲಾಲ್‌ರಿಗಿಂತ ಸೂಕ್ತ ವ್ಯಕ್ತಿ ಬೇರೆ ಯಾರಿದ್ದಾರೆ? ಪ್ರವಾದಿಯವರ(ಸ) ಆಯ್ಕೆ ಅದೆಷ್ಟು ಉತ್ತಮವಾದುದು?

# ಗೌರವಯುತ ಪ್ರತೀಕಾರ

**ಕು**ರೈಶರ ವ್ಯಾಪಾರ ತಂಡವು ಆಗಮಿಸುತ್ತಿದೆ! ಅವರನ್ನು ಸುತ್ತುವರಿಯಬೇಕು. ಅದರಲ್ಲಿನ ಸಂಪತ್ತನ್ನು ಅಲ್ಲಾಹನು ನಿಮಗೆ ನೀಡಬಹುದು. ಅಬೂ ಸುಫ್‌ಯಾನ್‌ನ ನೇತೃತ್ವದ ವ್ಯಾಪಾರಿ ತಂಡ ಸಿರಿಯಾದಿಂದ ಮರಳುತ್ತಿದೆಯೆಂದರಿತ ಪ್ರವಾದಿವರ್ಯರು(ಸ) ತಮ್ಮ ಅನುಯಾಯಿಗಳೊಡನೆ ಹೇಳಿದರು.

ಅದು ಮಕ್ಕಾದ ಶ್ರೀಮಂತ ವರ್ತಕರ ತಂಡವಾಗಿತ್ತು. ತಮ್ಮ ಸಂಪತ್ತೆಲ್ಲವನ್ನೂ ತಡೆದಿರಿಸಿದ ಅಥವಾ ವಶಪಡಿಸಿಕೊಂಡಿರುವ ಶತ್ರುಗಳ ಹಣವನ್ನು ಕಸಿದುಕೊಳ್ಳುವುದು ಅನ್ಯಾಯವಲ್ಲವೆಂದು ಮುಸ್ಲಿಮರು ತಿಳಿದಿದ್ದರು. ಆದ್ದರಿಂದ ಹೆಚ್ಚಿನವರು ಈ ಆದೇಶವನ್ನು ಒಪ್ಪಿಕೊಂಡರು. ಆದರೆ ಕೆಲವು ಮಂದಿಗೆ ಅದು ಇಷ್ಟವಾಗಲಿಲ್ಲ. ಸಂಪತ್ತಿನ ಕಡೆಗೆ ಕಣ್ಣು ನೆಟ್ಟಿದ್ದ ಕೆಲವು ಅವಿಶ್ವಾಸಿಗಳು ಮುಸ್ಲಿಮರೊಂದಿಗೆ ಸೇರಲು ಪ್ರಯತ್ನಿಸಿದರು. ಆದರೆ ಸಂದೇಶವಾಹಕರು ಒಪ್ಪಲಿಲ್ಲ.

ಸಿರಿಯಾಕ್ಕೆ ಹೋಗುವಾಗ ಮುಹಮ್ಮದ್(ಸ) ತಮ್ಮ ವ್ಯಾಪಾರಿ ತಂಡವನ್ನು ತಡೆಯಲು ಶ್ರಮಿಸಿದ ವಿಷಯ ಅಬೂ ಸುಫ್‌ಯಾನ್‌ರಿಗೆ ತಿಳಿದಿತ್ತು. ಮರಳಿ ಬರುವಾಗ ಅವರು ದಾಳಿ ಮಾಡಬಹುದೆಂದು ಅವರಿಗೆ ಭಯವಾಯಿತು. ಆದ್ದರಿಂದ ವ್ಯಾಪಾರಿ ತಂಡವು ಆಕ್ರಮಿಸಲ್ಪಟ್ಟಿರುವ ವಿಷಯವನ್ನು ಮಕ್ಕಾದ ಜನರಿಗೆ ತಿಳಿಸಲು ಲಮ್‌ಲಮ್ ಬಿನ್ ಗಿಫಾರಿಯವರನ್ನು ಅತ್ತ ಕಳುಹಿಸಿದರು. ಆತ ತನ್ನ ಒಂಟೆಯ ಮೂಗು ಮತ್ತು ಕಿವಿಯನ್ನು ಕತ್ತರಿಸಿ, ಜೀನನ್ನು ತಲೆ ಕೆಳಗಾಗಿಸಿ, ತನ್ನ ಬಟ್ಟೆಯನ್ನು ಹಿಂದೆ ಮುಂದೆ ಹರಿದು ಒಂಟೆಯ ಮೇಲೇರಿ ಜೋರಾಗಿ ಬೊಬ್ಬಿರಿದ.

"ಕುರೈಶರೇ! ನಿಮ್ಮ ಸಂಪತ್ತೆಲ್ಲವೂ ಅಬೂ ಸುಫ್‌ಯಾನ್‌ನ ಬಳಿಯಿದೆ. ಮುಹಮ್ಮದ್(ಸ) ಮತ್ತು ಸಂಗಡಿಗರು ಅದನ್ನು ತಡೆದಿರಿಸಿದ್ದಾರೆ. ಆದ್ದರಿಂದ ಎಲ್ಲರೂ ಸಹಾಯ ಮಾಡಲು ಬನ್ನಿ!" ಸುದ್ದಿಕೇಳಿ ಎಲ್ಲರೂ ಕಅಬಾದಲ್ಲಿ ಜಮಾಯಿಸಿದರು. ದುಷ್ಟ ಹಾಗೂ ವಾಚಾಳಿಯಾಗಿದ್ದ ಅಬೂಜಹಲ್ ಜನರನ್ನು ಯುದ್ಧಕ್ಕೆ ಪ್ರೇರೇಪಿಸಿದ. ಎಲ್ಲರೂ ಅದಕ್ಕೆ ಸಜ್ಜಾದರು. ಮುಸ್ಲಿಮರ ಕಥೆ ಮುಗಿಸಬೇಕೆಂದು ಅವರೆಲ್ಲರೂ ತೀರ್ಮಾನಿಸಿದರು.

ಉಮಯ್ಯ ಬಿನ್ ಖಲಫ್ ಎಂಬ ವ್ಯಕ್ತಿ ಯುದ್ಧದಿಂದ ದೂರವುಳಿಯಲು ತೀರ್ಮಾನಿಸಿದರು. ಉಕ್ಬಾ ಬಿನ್ ಅಬೀ ಮುಐತ್ ಮತ್ತು ಅಬೂಜಹಲ್ ಅವನನ್ನು ಭೇಟಿಯಾದರು. ಉಕ್ಬಾನ ಕೈಯಲ್ಲಿ ಲೋಬಾನ ಉರಿಸುವ ಪಾತ್ರೆಯಿತ್ತು. ಅಬೂಜಹಲ್‌ನ ಬಳಿ ಸ್ತ್ರೀಯರ ಸೌಂದರ್ಯ ಸಾಧನಗಳು ಇತ್ತು. ಲೋಬಾನದ ಪಾತ್ರೆಯನ್ನು ಉಮಯ್ಯನ ಮುಂದಿರಿಸಿ ಉಕ್ಬಾ ಹೇಳಿದ: 'ಏ ಅಬೂ ಅಲಿ! ಈ ಲೋಬಾನವನ್ನು ಆಸ್ವದಿಸು. ನೀವು ಓರ್ವ ಸ್ತ್ರೀಯಲ್ಲವೇ?' ಅಬೂಜಹಲ್ ಹೇಳಿದ, 'ನೀನು ಕಣ್ಣಿಗೆ ಕಾಡಿಗೆ ಹಚ್ಚು. ನೀವು ಮಹಿಳೆಯರ ವಂಶಕ್ಕೆ ಸೇರಿದ್ದೀರಲ್ಲವೇ?' ಈ ಅಪಹಾಸ್ಯ ಉಮಯ್ಯನಿಗೆ ಅಸಹ್ಯವೆನಿಸಿತು. ಆತ ಹೇಳಿದ: 'ಇಲ್ಲಿ ದೊರೆಯುವ ಒಂಟೆಗಳಲ್ಲೇ ಅತ್ಯುತ್ತಮವಾದ ಒಂದು ಒಂಟೆಯನ್ನು ತನ್ನಿ!' ಹೀಗೆ ಉಮಯ್ಯ ಅವರೊಡನೆ ಯುದ್ಧಕ್ಕೆ ಹೋಗಲು ಸಿದ್ಧನಾದನು.

ಹಿಜರಿ ಎರಡನೆಯ ವರ್ಷ ಪ್ರವಾದಿ(ಸ) ಹಾಗೂ ಸಂಗಡಿಗರು ಮದೀನದಿಂದ ಹೊರಟರು. ಅವರು ಮುನ್ನೂರ ಐದು ಮಂದಿ ಇದ್ದರು. ದಾರಿಯಲ್ಲಿ ಕುರೈಶರ ಯುದ್ಧ ಸಿದ್ಧತೆಯ ಸುದ್ದಿ ಲಭಿಸಿತು. ಪ್ರವಾದಿವರ್ಯರು(ಸ) ಸಂಗಾತಿಗಳೊಡನೆ ಸಮಾಲೋಚನೆ ನಡೆಸಿದರು. ಎಲ್ಲರ ಇಂಗಿತದಂತೆ ಅವರು ಮುನ್ನುಗ್ಗಲು ತೀರ್ಮಾನಿಸಿದರು.

ವ್ಯಾಪಾರಿ ತಂಡವು ಇನ್ನೊಂದು ದಾರಿಯಿಂದ ಪಾರಾಯಿತಾದರೂ ಅಬೂಜಹಲ್‌ನ ನೇತೃತ್ವದ ಸೇನೆ ಮುಸ್ಲಿಮರೊಡನೆ ಯುದ್ಧ ಮಾಡಲು ನಿಶ್ಚಯಿಸಿತು. ಬದ್ರ್ ಎಂಬಲ್ಲಿ ಎರಡು ತಂಡಗಳು ಕಾದಾಡಿದವು. ಶತ್ರುಗಳ ಸಂಖ್ಯೆಯು ಮುಸ್ಲಿಮರ ಮೂರು ಪಟ್ಟು ಅಧಿಕವಾಗಿತ್ತು. ಆದರೆ ಯುದ್ಧವು ಮುಸ್ಲಿಮರಿಗೆ ಅನುಕೂಲವಾಗಿತ್ತು. ಪ್ರವಾದಿವರ್ಯರ(ಸ) ಪ್ರೋತ್ಸಾಹ, ಪ್ರೇರಣೆಯಿಂದ ಅವರಲ್ಲಿ ಶಕ್ತಿ ಚೈತನ್ಯವು ವರ್ಧಿಸಿತ್ತು. ಶತ್ರು ಸೇನೆಯೊಳಗೆ ನುಗ್ಗಿ ಧೈರ್ಯದಿಂದ ಹೋರಾಡುವವರಿಗೆ ಸ್ವರ್ಗವಿದೆ ಎಂಬ ಆಶ್ವಾಸನೆಯು ಅವರನ್ನು ತಡೆಯುವವರೇ ಇಲ್ಲದಂತಾಗಿಸಿತು. ಅವರ ಮುಖ್ಯ ಗುರಿ ಕುರೈಶ್ ಪ್ರಮುಖರು ಹಾಗೂ ನಾಯಕರಾಗಿದ್ದರು. ಪವಿತ್ರ ನಗರದಿಂದ ಹಾಗೂ ದೇವಮಾರ್ಗದಿಂದ ತಡೆದದ್ದಲ್ಲದೆ ಮಕ್ಕಾದಲ್ಲಿ ಅವರು ನಡೆಸಿದ ಕ್ರೂರ ದೌರ್ಜನ್ಯಗಳಿಗೆ ಪ್ರತೀಕಾರ ಪಡೆಯಬೇಕೆಂಬ ಉತ್ಸುಕತೆ ಅವರಲ್ಲಿ ತುಂಬಿ ತುಳುಕುತ್ತಿತ್ತು.

ಯುದ್ಧರಂಗದಲ್ಲಿ ಬಿಲಾಲ್ ಉಮಯ್ಯ ಮತ್ತು ಆತನ ಮಗನನ್ನು ಕಂಡರು. ಉಮಯ್ಯ ಬಿಲಾಲ್‌ರ ಯಜಮಾನನಾಗಿದ್ದ, ಮಕ್ಕಾದ ಮರಳಲ್ಲಿ ನಗ್ನರಾಗಿಸಿ, ಮಲಗಿಸಿ, ಬಂಡೆಕಲ್ಲನ್ನು ಎದೆಯ ಮೇಲಿರಿಸಿ ಕುತ್ತಿಗೆಗೆ ಹಗ್ಗ ಕಟ್ಟಿ ಎಳೆದಾಡಿ, ಇಸ್ಲಾಮಿನಿಂದ ದೂರ ಸರಿಸಲು ಯತ್ನಿಸಿದ ಕುರೈಶಿ ನಾಯಕ ಎದುರಿನಲ್ಲಿದ್ದಾನೆ. ಅವನನ್ನು ಕಂಡ ಕೂಡಲೇ ಬಿಲಾಲ್ ಕೂಗಿ ಹೇಳಿದರು: "ಉಮಯ್ಯ" ಇಲ್ಲಿದ್ದಾನೆ. ಅವನು ಬದುಕಿ ಉಳಿದರೆ ಮತ್ತೆ ನನಗೆ ಉಳಿಗಾಲವಿಲ್ಲ.

ಆಗ ಅಬ್ದುರ್ರಹ್ಮಾನ್ ಬಿನ್ ಔಫ್ ಮುಂದೆ ಬಂದು, 'ಇವರನ್ನು ಕೊಲ್ಲಲು ಸಾಧ್ಯವಿಲ್ಲ, ಇವರಿಬ್ಬರೂ ನನ್ನ ಸೆರೆಯಾಳುಗಳು' ಎಂದು ಹೇಳಿದರು.

ಯುದ್ಧದ ಆರಂಭದಲ್ಲೇ ಮುಸ್ಲಿಮರ ಕೈಮೇಲಾಗಿ ಅಬೂಜಹಲ್ ಸೇರಿದಂತೆ ಹಲವು ಪ್ರಮುಖ ವ್ಯಕ್ತಿಗಳು ವಧಿಸಲ್ಪಟ್ಟರು. ಉಳಿದವರು ಪಲಾಯನ ಮಾಡಿದ್ದರು. ಆದರೆ ಉಮಯ್ಯ ಹಾಗೂ ಆತನ ಪುತ್ರನಿಗೆ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಅಬ್ದುರ್ರಹ್ಮಾನ್ ಬಿನ್ ಔಫ್‌ರೊಂದಿಗೆ ಅಭಯ ಯಾಚಿಸಿದರು.

'ಅದು ಸಾಧ್ಯವಿಲ್ಲ, ಅವರು ಜೀವಂತ ಉಳಿಯಲು ಸಾಧ್ಯವೇ ಇಲ್ಲ' ಎಂದು ಹೇಳಿ ಬಿಲಾಲ್ ಅವರನ್ನು ಕೊಲ್ಲಲು ಮುಂದೆ ಬಂದರು. ಅಬ್ದುರ್ರಹ್ಮಾನ್ ತಡೆದರು. ಆದರೆ ಬಿಲಾಲ್‌ರಿಗೆ ಅದನ್ನು ಒಪ್ಪಿಕೊಳ್ಳಲು ಸಾಧ್ಯವಾಗಲಿಲ್ಲ. ಇಲ್ಲಿಯವರೆಗೆ ನಮ್ಮ ನಾಶಕ್ಕಾಗಿ ಎಲ್ಲಾ ವಿಧದಿಂದಲೂ ಪ್ರಯತ್ನಿಸಿದ ಶತ್ರುಗಳ ನಾಯಕನು ಸುಲಭದ ತುತ್ತಾಗಿ ದೊರೆತಿರುವಾಗ ಅವನನ್ನು ಸುಮ್ಮನೆ ಬಿಟ್ಟುಬಿಡುವುದೇ? ಬಿಲಾಲ್‌ರಿಗೆ ಊಹಿಸುವುದೂ ಕಷ್ಟವಾಯಿತು. ಬಿಲಾಲ್ ಪುನಃ ದೊಡ್ಡ ಧ್ವನಿಯಲ್ಲಿ ಕೂಗಿದರು. 'ಅಲ್ಲಾಹನ ಸಹಾಯಕರೇ! ಸತ್ಯನಿಷೇಧಿಗಳ ನಾಯಕ ಉಮಯ್ಯ ಇಲ್ಲಿದ್ದಾನೆ. ಅವನು ಉಳಿದರೆ ನಮಗೆ ಉಳಿಗಾಲವಿಲ್ಲ.'

ಎಲ್ಲರೂ ಧಾವಿಸಿ ಬಂದು ಅವರಿಬ್ಬರನ್ನು ಸುತ್ತುವರಿದರು. ಅಬ್ದುರ್ರಹ್ಮಾನ್ ಅವರನ್ನು ತಡೆಯಲು ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಓರ್ವ ಸಹಾಬಿ ಉಮಯ್ಯನ ಮಗ ಅಲಿಯನ್ನು ಕೊಂದೇ ಬಿಟ್ಟರು. ಇದನ್ನು ಕಂಡು ದಿಗ್ಭ್ರಾಂತನಾದ ಉಮಯ್ಯ ಮಗನೆಡೆಗೆ ತಿರುಗಿದರು. ಈ ಸಂದರ್ಭವನ್ನು ಉಪಯೋಗಿಸಿ ಬಿಲಾಲ್ ಅವನ ಮೇಲೆ ದಾಳಿ ಮಾಡಿದರು. 'ಅಲ್ಲಾಹನು ಏಕನು! ಏಕನು! ಎಂದು ಘೋಷಿಸುತ್ತಾ ತಮ್ಮ ಕಾರ್ಯವನ್ನು ಪೂರ್ಣಗೊಳಿಸಿದರು. ಅಲ್ಲಾಹನು ಏಕನು ಎಂಬ ಬಿಲಾಲ್‌ರ ಮಾತುಗಳನ್ನೇ ನೆಪವಾಗಿಸಿ ಉಮಯ್ಯ ಬಿಲಾಲ್‌ರ ಮೇಲೆ ಕ್ರೂರ ದೌರ್ಜನ್ಯವನ್ನು ಎಸಗಿದ್ದ. ಬಿಲಾಲ್ ಯುದ್ಧದ ಆರಂಭದಿಂದಲೇ ಈ ಘೋಷಣೆಯನ್ನು ಕೂಗುತ್ತಿದ್ದರು. ಅವರ ಸಂಗಡಿಗರಿಗೆ ಸ್ಫೂರ್ತಿ ತುಂಬಲು ಹಾಗೂ ಎದುರಾಳಿಗಳ ಮನೋಸ್ಥೈರ್ಯ ಕುಂದಲು ಕಾರಣವಾದ ಮಂತ್ರವೂ ಇದೇ ಆಗಿತ್ತು.

ಅದು ರಣರಂಗವಾಗಿತ್ತು. ಅಲ್ಲಿ ಔದಾರ್ಯ ಹಾಗೂ ಸ್ನೇಹ ಬಾಂಧವ್ಯಕ್ಕೆ ಅವಕಾಶವಿಲ್ಲ. ಶಸ್ತ್ರಾಸ್ತ್ರ ಪ್ರಯೋಗವೇ ಮುಖ್ಯವಾಗಿದೆ. ವ್ಯಕ್ತಿಯ ಶಕ್ತಿ ಸಾಮರ್ಥ್ಯವೇ ವಿಜಯಕ್ಕೆ ಕಾರಣವಾಗುತ್ತದೆ. ರಣರಂಗದಲ್ಲಿ ಕೊಲ್ಲಲು ಬಂದವರೊಡನೆ ಸೌಹಾರ್ದ ತೋರಿಸಬೇಕೆಂಬುದು ನ್ಯಾಯವಲ್ಲ. ಹಾಯಲು ಬಂದ ಗೂಳಿಗೆ ವೇದವನ್ನು ಓದಿದರೆ ಏನು ಪ್ರಯೋಜನ? ಆದ್ದರಿಂದ ಬಿಲಾಲ್ ಉಮಯ್ಯನಿಗೆ ಔದಾರ್ಯ ತೋರಿಸಬೇಕಾಗಿತ್ತೆಂಬ ವಾದ ಅರ್ಥ ಹೀನವಾದದ್ದು. ಬಿಲಾಲ್‌ರು ಶತ್ರುಗಳ ಕೈಗೆ ಸಿಕ್ಕಿ ಬಿದ್ದಿದ್ದರೆ ಅವರನ್ನು ಸುಮ್ಮನೆ

ಬಿಟ್ಟು ಬಿಡುತ್ತಿದ್ದರೆ? ಖಂಡಿತವ್ವಾಗಿಯೂ ಬಿಡುತ್ತಿರಲಿಲ್ಲ, ಆದ್ದರಿಂದ ಅವರ ಕೈಗೆ ಸಿಕ್ಕಿರುವ ಶತ್ರುಗಳ ನಾಯಕನನ್ನು ಬಿಟ್ಟು ಬಿಡಬೇಕಿತ್ತೆಂಬ ವಾದವನ್ನು ಅಂಗೀಕರಿಸಲು ಸಾಧ್ಯವಿಲ್ಲ.

ವಾಸ್ತವದಲ್ಲಿ ಇದು ಉಲ್ಲಂಘಿಸಲು ಸಾಧ್ಯವಿಲ್ಲದ ಅಲ್ಲಾಹನ ವಿಧಿಯಾಗಿತ್ತು. ಎಲ್ಲಾ ಕಾರ್ಯಗಳನ್ನು ನಿರ್ಣಯಿಸುವ ಶಕ್ತಿ ಅಲ್ಲಾಹನಿಗೆ ಮಾತ್ರವಿದೆ. ಮನುಷ್ಯರು ಅದನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವವರು ಮಾತ್ರ. ಅಕ್ರಮಿಗಳು ಆಕ್ರಮಿಸಲ್ಪಡುವುದು ಮತ್ತು ಮರ್ದಕರು ಮರ್ದಿಸಲ್ಪಡುವುದು ಒಂದು ಲೋಕ ರೂಢಿಯಾಗಿದೆ. ಇದುವೇ ಪ್ರತೀಕಾರ ತೀರಿಸಲು ಬಿಲಾಲ್‌ರನ್ನು ಪ್ರೇರೇಪಿಸಿತ್ತು.

ಗಾಯಗೊಂಡು ಕುಸಿದ ಉಮಯ್ಯನನ್ನು ನೋಡಿ ಬಿಲಾಲ್ ಹೇಳಿದರು, 'ಸತ್ಯನಿಷೇಧಿಗಳ ನಾಯಕನೇ! ಇದು ನಾನು! ಬಿಲಾಲ್ ಎಂಬ ಕರಿಯ ಗುಲಾಮನನ್ನು ಇಸ್ಲಾಮ್‌ನ ಮೂಲಕ ಅಲ್ಲಾಹನು ಉನ್ನತಿಗೇರಿಸಿದ್ದಾನೆ. ನಿನ್ನನ್ನು ಅನ್ಯಾಯ, ಅಕ್ರಮ ಹಾಗೂ ಸತ್ಯನಿಷೇಧದ ಕಾರಣದಿಂದ ಅಪಮಾನಿಸಿದ್ದಾನೆ. ಆದ್ದರಿಂದ ನೀನು ನಿನ್ನ ಕೆಡುಕಿನೊಂದಿಗೆ ನರಕಕ್ಕೆ ಹೋಗು.'

ಬಿಲಾಲ್ ಯುದ್ಧ ಪ್ರವೀಣರಾಗಿರಲಿಲ್ಲ, ಬದ್ರ್ ಯುದ್ಧಕ್ಕಿಂತ ಮೊದಲು ಆಯುಧವನ್ನು ಕೈಗೆತ್ತಿರಲಿಲ್ಲ, ಅವರಿಗೆ ಸೈನಿಕ ಕುದುರೆಗಳಿರಲಿಲ್ಲ, ಅದು ಮೂವರಿಗೆ ಒಂದರಂತೆ ಇತ್ತು. ದೇಹದ ರಕ್ಷಣೆಗೆ ಯುದ್ಧ ಕವಚವಿರಲಿಲ್ಲ, ಬದ್ರ್‌ನಲ್ಲಿ ಹೆಚ್ಚಿನೆಲ್ಲಾ ಮುಸ್ಲಿಮರ ಸ್ಥಿತಿಯು ಇದೇ ಆಗಿತ್ತು. ಸೈನಿಕ ಬಲ ಮಾತ್ರವಲ್ಲ ಆಯುಧವೂ ಅವರಲ್ಲಿ ಕಡಿಮೆಯಿತ್ತು. ಆದರೂ ಅವರು ಮರಣವನ್ನು ಪ್ರೀತಿಸಿದರು. ಹುತಾತ್ಮತೆಯಲ್ಲಿ ಸ್ವರ್ಗವನ್ನು ಕಂಡರು. ಬಿಲಾಲ್‌ರೊಂದಿಗೆ ಹೋರಾಡುವಾಗ ಉಮಯ್ಯ ಕುದುರೆಯ ಮೇಲಿದ್ದರು. ಆದರೂ ಅವರನ್ನು ಮುಗಿಸಲು ಬಿಲಾಲ್‌ರಿಗೆ ಸಾಧ್ಯವಾಯಿತು. ಸತ್ಯವಿಶ್ವಾಸವು ದಯಪಾಲಿಸಿದ ಧೈರ್ಯ, ಸ್ಫೂರ್ತಿ ಹಾಗೂ ಶಕ್ತಿಯೇ ಇದಕ್ಕೆ ಮುಖ್ಯ ಕಾರಣವಾಗಿತ್ತು.

ಉಮಯ್ಯ ಯುದ್ಧದಿಂದ ದೂರವಿರಲು ಸಾಧ್ಯವಿರುವಷ್ಟು ಪ್ರಯತ್ನಿಸಿದ್ದ. ಆದರೆ ಉಕ್ಬಾ ಮತ್ತು ಅಬೂಜಹಲ್‌ನ ಅಪಹಾಸ್ಯ ಸಹಿಸಲಾಗದೆ ಬದ್ರ್‌ಗೆ ಬಂದಿದ್ದ, ಬಿಲಾಲ್ ಮತ್ತು ಇತರ ಮುಸ್ಲಿಮರನ್ನು ಕ್ರೂರವಾಗಿ ಮರ್ದಿಸಲು ನಿರಂತರ ಪ್ರೇರೇಪಿಸಿದ್ದ ಅವರೀರ್ವರೇ ಬಿಲಾಲ್‌ರನ್ನು ಉಮಯ್ಯನೊಂದಿಗೆ ಪ್ರತೀಕಾರ ತೀರಿಸಲು ಯುದ್ಧರಂಗಕ್ಕೆ ಕರೆತಂದದ್ದು ಕಾಕತಾಳೀಯವಾದರೂ ಸಾರ್ಥಕವಾಗಿತ್ತು.

ಉಮಯ್ಯನ ಅಂತ್ಯದ ಬಗ್ಗೆ ತಿಳಿದ ಅಬೂಬಕರ್(ರ) ಹೇಳಿದರು, ಬಿಲಾಲ್, ನೀವು ಸಂತೋಷಪಡಿರಿ. ನೀವು ಅತ್ಯುತ್ತಮವಾಗಿ ಪ್ರತೀಕಾರ ತೀರಿಸಿದ್ದೀರಿ. ಅಲ್ಲಾಹನು ನಿಮ್ಮನ್ನು ಅನುಗ್ರಹಿಸಲಿ.

✤ ✤ ✤

# ಕುತಂತ್ರದ ಸೋಲು

'ಬಿಲಾಲ್! ನಿಮಗೆ ಅಗತ್ಯವಿರುವ ವಸ್ತುಗಳು ನನ್ನ ಬಳಿಯಿದೆ. ನಿಮಗೆ ಅದನ್ನು ನಾನು ಸಾಲವಾಗಿ ನೀಡುತ್ತೇನೆ. ನೀವು ಬೇರೆ ಯಾರೊಂದಿಗೂ ಪಡೆಯಬೇಕಾಗಿಲ್ಲ.' ಓರ್ವ ಯಹೂದಿ ಗೆಳೆಯ ಹೇಳಿದ.

ಪರಿಚಯಸ್ಥನಾಗಿದ್ದರೂ ಇದರಲ್ಲೇನಾದರೂ ಮೋಸವಿರಬಹುದೇ ಎಂದು ಭಾವಿಸಿ ಬಿಲಾಲ್(ರ) ಸ್ವಲ್ಪ ಹೊತ್ತು ಏನೂ ಮಾತನಾಡಲಿಲ್ಲ.

'ನಿಮಗೆ ಬೇಕಾದದ್ದೆಲ್ಲವೂ ನನ್ನ ಬಳಿಯಿದೆ' ಯಹೂದಿ ಒತ್ತಾಯಿಸಿದ.

'ಸರಿ: ಹಾಗೆಯೇ ಆಗಲಿ' ಎಂದು ಬಿಲಾಲ್(ರ) ಒಪ್ಪಿಕೊಂಡರು.

'ಬಿಲಾಲ್! ನಿನ್ನ ಮೇಲೆ ನನಗೆ ನಂಬಿಕೆಯಿದೆ. ಆದರೆ ಏನಾದರೂ ವಸ್ತುವನ್ನು ಅಡವಿಡದೆ ನಾವು ಸಾಲ ನೀಡಲಾರೆವು. ನಿಮ್ಮ ಬಳಿ ಅಡವಿಡಲು ಏನಾದರೂ ಇದೆಯಾ?'

'ಅಂತಹ ವಸ್ತುಗಳೇನಾದರೂ ಇದ್ದರೆ ನಾನು ಸಾಲ ಪಡೆಯುತ್ತಿರಲಿಲ್ಲವಲ್ಲಾ' ಬಿಲಾಲ್(ರ) ಹೇಳಿದರು.

'ನಾನು ನಿಮಗೆ ಕಷ್ಟಕರವಾದ ಶರತ್ತೇನೂ ವಿಧಿಸುವುದಿಲ್ಲ, ನನಗೆ ನಿಮ್ಮಲ್ಲಿ ನಂಬಿಕೆಯಿದೆ. ಆದರೂ ಸಾಲ ತೀರಿಸುವ ಅವಧಿ ಮುಗಿದರೂ ನೀವು ಮರು ಪಾವತಿಸದಿದ್ದರೆ ನಾನು ನಿಮ್ಮನ್ನು ಸ್ವೀಕರಿಸುತ್ತೇನೆ. ಇದುವೇ ಒಂದು ಶರತ್ತು. ಯಹೂದಿಯ ಮಾತುಗಳನ್ನು ಕೇಳಿ ಬಿಲಾಲ್(ರ) ತಟಸ್ಥರಾದರು.

'ನಿಮಗೆ ಖಂಡಿತವಾಗಿಯೂ ಸಾಲ ತೀರಿಸಲು ಸಾಧ್ಯವಿದೆ. ಆದರೂ ಒಂದು ಶರತ್ತು ಅಷ್ಟೆ' ಯಹೂದಿ ನಗುತ್ತಾ ಹೇಳಿದ.

ಬಿಲಾಲ್(ರ) ಅದನ್ನು ಒಪ್ಪಿಕೊಂಡರು. ಅದರಂತೆ ತಿಂಗಳ ಕೊನೆಗೆ ಸಾಲ ತೀರಿಸುವ ಕರಾರಿನೊಂದಿಗೆ ಒಪ್ಪಂದವಾಯಿತು.

ನಿಜವಾಗಿ ಆ ಯಹೂದಿ ಬಿಲಾಲ್‌ರನ್ನು(ರ) ಗುಲಾಮನಾಗಿಸಬೇಕೆಂದು ಬಯಸಿದ್ದ, ಹೇಗಾದರೂ ತನ್ನ ಬಲೆಗೆ ಹಾಕಿಕೊಳ್ಳಬೇಕೆಂಬ ಚಿಂತೆ ಹಲವು ದಿನಗಳಿಂದ ಅವರನ್ನು

ಕಾಡುತ್ತಿತ್ತು. ಬಿಲಾಲ್‌ರ(ರ) ಅದಾನ್ ಕೇಳಲಾರಂಭಿಸಿದ ಬಳಿಕ ಆತ ಮಾನಸಿಕ ನೆಮ್ಮದಿ ಕಳಕೊಂಡಿದ್ದ. ಆ ಅದಾನ್ ಕರೆಯಲ್ಲಿ ಬಹಳ ಆಕರ್ಷಣೆ ಹಾಗೂ ಅನುರಾಗ ಮೂಡಿತ್ತು. ಬಿಲಾಲ್‌ರ(ರ) ಸ್ವರ ಮಾಧುರ್ಯವು ಅಸೂಯೆಯನ್ನುಂಟು ಮಾಡುತ್ತಿತ್ತು. ಆತ ಸ್ವತಃ ಹೇಳಿಕೊಳ್ಳುತ್ತಿದ್ದ, 'ನನ್ನ ಕಿವಿಗಳಿಗಂತೂ ಅದನ್ನು ಕಡೆಗಣಿಸಲು ಸಾಧ್ಯವಾಗುತ್ತಿಲ್ಲ. ಆ ಶಬ್ದವು ಮಾಂತ್ರಿಕವಾದುದು. ಅದರಲ್ಲಿ ಮೋಸ ಅಡಗಿದೆ. ಆದ್ದರಿಂದ ಇತಿಯೋಪಿಯಾದ ಆ ಕರಿಯ ಗುಲಾಮನ ಶಬ್ದವನ್ನು ಮುಸ್ಲಿಮರು ಆಲಿಸಬಾರದು ಮತ್ತು ನನ್ನ ಸಹೋದರರು ಅದರಿಂದ ಇಸ್ಲಾಮಿಗೆ ಆಕರ್ಷಿಸಲ್ಪಡಬಾರದು.

ಹೀಗೆ ಅದು ಆತ ಹೆಣೆದ ತಂತ್ರವಾಗಿತ್ತು. ಪ್ರವಾದಿ(ಸ) ಮತ್ತು ಅನುಯಾಯಿಗಳು ದಟ್ಟ ದಾರಿದ್ರ್ಯದಲ್ಲಿದ್ದಾರೆಂದು ಅವನಿಗೆ ತಿಳಿದಿತ್ತು. ಪ್ರಾಥಮಿಕ ಅವಶ್ಯಕತೆಯನ್ನು ಪೂರೈಸಲು ದಾರಿಯಿರಲಿಲ್ಲ. ಹಸಿವು ಅವರ ಜೀವನದ ಒಂದು ಭಾಗವಾಗಿ ಮಾರ್ಪಟ್ಟಿತ್ತು. ಅದರೊಂದಿಗೆ ಬಿಲಾಲ್(ರ) ಇತರರ ಆಹಾರದ ಬಗ್ಗೆಯೂ ಗಮನ ಹರಿಸುತ್ತಿದ್ದರು. ಇಂತಹ ಸಂದಿಗ್ಧ ಘಟ್ಟದಲ್ಲಿ ಬಿಲಾಲ್‌ರನ್ನು(ರ) ಸಾಲಗಾರನನ್ನಾಗಿಸಿ, ತನ್ನ ಗುಲಾಮನಾಗಿಸಿಕೊಳ್ಳಬೇಕೆಂಬ ತೀವ್ರ ಬಯಕೆ ಆ ಯಹೂದಿಯದ್ದಾಗಿತ್ತು.

ಸಾಲ ಪಾವತಿಸಬೇಕಾದ ದಿನ ಸಮೀಪಿಸಿತು. ಬಿಲಾಲ್‌ರ(ರ) ಕೈಯಲ್ಲಿ ಚಿಕ್ಕಾಸೂ ಇರಲಿಲ್ಲ. ಪ್ರವಾದಿವರ್ಯರು(ಸ) ಸಹ ಬರಿಗೈಯಲ್ಲಿದ್ದಾರೆಂದು ಬಿಲಾಲ್‌ರಿಗೆ(ರ) ತಿಳಿದಿತ್ತು. ಯಹೂದಿ ಆ ದಿನ ಬರುವ ಮೊದಲೇ ಕಠಿಣ ತಾಕೀತು ಮಾಡಿದ. ನಿಶ್ಚಿತ ದಿನದಂದು ಸಾಲ ಪಾವತಿಸದಿದ್ದರೆ ತನ್ನ ಗುಲಾಮನಾಗುವ ವಿಷಯವನ್ನು ನೆನಪಿಸಿದ.

ಬಿಲಾಲ್(ರ) ಸಾಲ ಪಡೆದ ವಿಷಯವನ್ನು ಪ್ರವಾದಿವರ್ಯರಿಗೆ(ಸ) ತಿಳಿಸಿರಲಿಲ್ಲ. ಬಿಲಾಲ್(ರ) ಬರಲಿರುವ ಗಂಡಾಂತರದ ಬಗ್ಗೆ ದುಃಖಿತರಾದರು. ಇನ್ನು ಪ್ರವಾದಿಯವರಿಗೆ(ರ) ತಿಳಿಸಿದೆ ಬೇರೆ ದಾರಿಯಿರಲಿಲ್ಲ. ಒಂದು ದಿನ ನಮಾಝ್‌ನ ಬಳಿಕ ಶರ್ತಕ್ಕೆ ಬದ್ಧವಾಗಿ ಸಾಲ ಪಡೆದ ವಿಷಯವನ್ನು ಪ್ರವಾದಿಯವರಿಗೆ(ಸ) ತಿಳಿಸಿದರು ಮತ್ತು ಮದೀನಾದಿಂದ ಹೊರಗೆ ಹೋಗಿ ಹಣ ಸಂಪಾದಿಸಲು ಅನುಮತಿ ಕೇಳಿದರು. ಆದರೆ ಪ್ರವಾದಿಯವರು(ರ) ಒಪ್ಪಲಿಲ್ಲ. ಬಿಲಾಲ್‌ರ(ರ) ಮುಖವು ದುಃಖದಿಂದ ಭಾರವಾಯಿತು. ತಾನು ಪುನಃ ಗುಲಾಮನಾಗುವ ಪರಿಸ್ಥಿತಿಯನ್ನು ನೆನೆದು ಕಂಪಿಸಿದರು. ರಾತ್ರಿಯಿಡೀ ನಿದ್ದೆಯಿಲ್ಲದೆಯೇ ಕಳೆದರು. ಬೆಳಿಗ್ಗೆ ಯಾರೋ ಬಾಗಿಲು ತಟ್ಟಿದ ಶಬ್ದದಿಂದ ವಾಸ್ತವಕ್ಕೆ ಬಂದರು. ಆಗಂತುಕ ಪ್ರವಾದಿಯವರು(ಸ) ನಿಮ್ಮನ್ನು ಕರೆಯುತ್ತಿದ್ದಾರೆಂದು ಹೇಳಿದ.

ಬಿಲಾಲ್‌ರು(ರ) ಕೂಡಲೇ ಪ್ರವಾದಿವರ್ಯರ(ಸ) ಬಳಿಗೆ ತಲುಪಿದರು. ಅವರನ್ನು ಕಾಣುತ್ತಲೇ ಸಂದೇಶವಾಹಕರು ಹೇಳಿದರು.

"ಬಿಲಾಲ್, ನೀವು ಸಂತೋಷಪಡಿರಿ. ಸಾಲ ತೀರಿಸುವ ಹಾದಿಯನ್ನು ಅಲ್ಲಾಹನು ತೋರಿಸಿಕೊಟ್ಟಿದ್ದಾನೆ." ತನಗೆ ಉಡುಗೊರೆಯಾಗಿ ದೊರೆತ ಹಣವನ್ನು ಬಿಲಾಲ್‌ರಿಗೆ ನೀಡಿ ಸಾಲ ಮರು ಪಾವತಿಸಲು ಸೂಚಿಸಿದರು.

ಬಿಲಾಲ್ ತನಗೆ ಸಾಲ ನೀಡಿದ ಯಹೂದಿಯನ್ನು ಹುಡುಕಿ ಆತನ ಹಣವನ್ನು ಹಿಂತಿರುಗಿಸಿದರು. ಹೀಗೆ ಅವರನ್ನು ತನ್ನ ಗುಲಾಮನಾಗಿಸುವ ಮತ್ತು ಮದೀನಾದ ಮರಳ ಕಣಗಳು ಹಾಗೂ ಖರ್ಜೂರದ ಮರಗಳನ್ನು ಪುಳಕಿತಗೊಳಿಸಿದ ಮನೋಹರ ಶಬ್ದವು ಮಸ್ಜಿದುನ್ನಬವಿಯಿಂದ ಮೊಳಗುವುದನ್ನು ಇಲ್ಲವಾಗಿಸುವ ಯಹೂದಿಯ ಕುತಂತ್ರ ಸಂಪೂರ್ಣವಾಗಿ ವಿಫಲವಾಯಿತು.

# ಪ್ರವಾದಿಯವರೊಂದಿಗೆ

**ಒಂ**ದು ದಿನ ಬಿಲಾಲ್‌ರನ್ನು(ರ) ಅವರ ಸಹೋದರ ಅಬೂರುವೈಹ ಅನಿರೀಕ್ಷಿತವಾಗಿ ಭೇಟಿಯಾದರು. ಪರಸ್ಪರ ಆಲಿಂಗನ ಹಾಗೂ ಕ್ಷೇಮ ಸಮಾಚಾರದ ಬಳಿಕ ತಾನು ಬಂದ ಉದ್ದೇಶವನ್ನು ತಿಳಿಸಿದರು.

'ಅತೀ ಅಗತ್ಯವಾದ ಒಂದು ಕೆಲಸಕ್ಕಾಗಿ ನಾನು ಯಮನ್‌ನಿಂದ ಬಂದಿದ್ದೇನೆ.'

'ಏನದು? ಹೇಳು.' ಬಿಲಾಲ್(ರ) ಹೇಳಿದರು.

'ನಾನೋರ್ವ ಮಹಿಳೆಯನ್ನು ವಿವಾಹವಾಗಬಯಸಿದ್ದೇನೆ. ಅದಕ್ಕಾಗಿ ಅವಳ ಸಂಬಂಧಿಕರೊಡನೆ ಮಾತುಕತೆ ನಡೆಸಿದೆ.' ಅಬೂ ರುವೈಹ ತಾನು ಬಂದ ಕಾರಣ ವಿವರಿಸಿದರು.

'ನಂತರ ಏನಾಯಿತು? ವಿವಾಹ ನಡೆಯಲಿಲ್ಲವೇ?'

'ನಾನು ಅವರೊಡನೆ ನನ್ನ ಎಲ್ಲಾ ವಿಷಯವನ್ನು ತಿಳಿಸಿದೆ. ಮಕ್ಕಾದ ಬನೂ ಜುಮಹ್ ಗೋತ್ರದ ಗುಲಾಮನಾಗಿದ್ದ ಬಿಲಾಲ್‌ನ ಸೋದರನೆಂದೂ ಹೇಳಿದೆ. ಆಗ ಅವರು ಬಿಲಾಲ್‌ರನ್ನು ಕರಕೊಂಡು ಬಂದರೆ ಈ ವಿವಾಹವಾಗಬಹುದು' ಎಂದರು. ಅದಕ್ಕಾಗಿ ನಿನ್ನನ್ನು ಯಮನ್‌ಗೆ ಕರೆದೊಯ್ಯಲು ಬಂದಿದ್ದೇನೆ ಎಂದನು.

'ಪ್ರವಾದಿವರ್ಯರು(ಸ) ಒಪ್ಪಿಗೆ ನೀಡಿದರೆ ನಾನು ಬರುತ್ತೇನೆ' ಎಂದು ಬಿಲಾಲ್(ರ) ಹೇಳಿದರು.

ವಿಷಯ ತಿಳಿದಾಗ ಪ್ರವಾದಿಯವರು(ಸ) ಒಪ್ಪಿಗೆ ಸೂಚಿಸಿದರು. ಹೀಗೆ ಇಬ್ಬರೂ ಪ್ರಯಾಣ ಹೊರಟರು. ರಾತ್ರಿಯಾಗುವಾಗ ಸ್ಥಳಕ್ಕೆ ತಲುಪಿದ ಅವರು ಬೆಳಗಾಗುವವರೆಗೆ ಒಂದು ಮಸೀದಿಯಲ್ಲಿ ತಂಗಿದರು. ನಂತರ ಹೆಣ್ಣಿನ ಮನೆಗೆ ತಲುಪಿದರು. ಬಿಲಾಲ್ ತನ್ನ ಪರಿಚಯವನ್ನು ಹೇಳಿದರು. ಆಗ ಆ ಮನೆಯವರು ಅಬೂ ರುವೈಹನ ಬಗ್ಗೆ ವಿಚಾರಿಸಿದರು.

'ಈತನ ಸ್ವಭಾವ ಅಷ್ಟು ಉತ್ತಮವಾಗಿಲ್ಲ, ಇಷ್ಟವಿದ್ದರೆ ಮದುವೆ ಮಾಡಿಕೊಡಬಹುದು. ಇಲ್ಲದಿದ್ದರೆ ನಿಮಗೆ ನಿರಾಕರಿಸಬಹುದು' ಬಿಲಾಲ್ ತನ್ನ ತಮ್ಮನ ಬಗ್ಗೆ ತನಗೆ ತಿಳಿದಿರುವ ವಿಷಯವನ್ನು ಹೇಳಿದರು. ಜೀವನದಲ್ಲಿ ಅಂದಿನ ವರೆಗೆ ಸುಳ್ಳು ಹೇಳದ, ಸತ್ಯವನ್ನೇ

ಹೇಳುತ್ತೇನೆಂಬ ದೃಢ ನಿರ್ಧಾರದಿಂದ ಕಠಿಣ ಮರ್ದನಕ್ಕೊಳಗಾದ ಬಿಲಾಲ್ ಸಹೋದರನಿಗೆ ಹೆಣ್ಣು ಸಿಗಲೆಂದು ಸತ್ಯವನ್ನು ಅಡಗಿಸಲು ಸಾಧ್ಯವೇ?

ಬಿಲಾಲ್‌ರ(ರ) ಸತ್ಯವಂತಿಕೆಯಿಂದ ಆಕರ್ಷಿತರಾದ ಆ ಹೆಣ್ಣಿನ ಕಡೆಯವರು ರುವೈಹಾರೊಡನೆ ವಿವಾಹ ನಡೆಸಿಕೊಟ್ಟರು. ಹೀಗೆ ಸಹೋದರನ ವಿವಾಹ ಕಾರ್ಯ ಪೂರ್ಣವಾದಾಗ ಬಿಲಾಲ್‌ರಿಗೂ ಕುಟುಂಬ ಜೀವನದ ಚಿಂತೆ ಉಂಟಾಯಿತು. ಅವರು ಸ್ವತಃ ಪ್ರಶ್ನಿಸಿಕೊಂಡರು. ನಾನು ಏಕೆ ವಿವಾಹವಾಗಬಾರದು? ಧರ್ಮದ ಪೂರ್ಣತೆಗೆ ಅದು ಅನಿವಾರ್ಯವಲ್ಲವೇ? ಗುಲಾಮನಾಗಿದ್ದ ನಾನು ಈಗ ಸ್ವತಂತ್ರನಾಗಿದ್ದೇನೆ. ಬ್ರಹ್ಮಚರ್ಯೆಯನ್ನು ಪ್ರವಾದಿವರ್ಯರು(ರ) ನಿಷೇಧಿಸಿದ್ದಾರೆ. ಆದ್ದರಿಂದ ಬಿಲಾಲ್(ರ) ತನ್ನ ವಿವಾಹದ ಬಗ್ಗೆ ಆಲೋಚಿಸಿದರು. ಯೋಗ್ಯ ಸಂಗಾತಿಗಾಗಿ ಹುಡುಕಾಟ ನಡೆಸಿದರು. ಮದುವೆಯ ಯೋಚನೆ ಯಮನ್‌ನಲ್ಲೇ ಬಂದುದರಿಂದ ಅಲ್ಲಿನ ಹುಡುಗಿಯನ್ನೇ ಹುಡುಕಲು ಪ್ರಯತ್ನಿಸಿದರು. ಕೊನೆಗೆ ಖವ್ಲಾನ್ ಗೋತ್ರದ ಹಿಂದ್ ಎಂಬ ಹುಡುಗಿಯ ವಿವಾಹ ಪ್ರಸ್ತಾಪ ಬಂತು. ಬಿಲಾಲ್(ರ) ಅವಳ ಸಂಬಂಧಿಕರೊಡನೆ ಹೇಳಿದರು: 'ನಾನು ಬಿಲಾಲ್ ಬಿನ್ ರಬಾಹ್. ಪ್ರವಾದಿ ಮುಹಮ್ಮದ್‌ರ(ಸ) ಅನುಯಾಯಿ. ಇತಿಯೋಪಿಯಾದ ಗುಲಾಮ! ನಾನು ದುರ್ಮಾರ್ಗದಲ್ಲಿದ್ದೆ, ಅಲ್ಲಾಹನು ನನಗೆ ಸನ್ಮಾರ್ಗ ತೋರಿಸಿದನು. ನಾನು ಗುಲಾಮನಾಗಿದ್ದೆ, ಇಸ್ಲಾಮ್ ನನ್ನನ್ನು ಸ್ವತಂತ್ರಗೊಳಿಸಿತು. ಹಿಂದ್‌ಳನ್ನು ನನಗೆ ವಿವಾಹ ಮಾಡಿಕೊಡುವುದಾದರೆ ಅಲ್ಲಾಹನಿಗೆ ಸ್ತುತಿ.'

ಹಿಂದ್‌ಳ ಸಂಬಂಧಿಕರು ಪ್ರವಾದಿವರ್ಯರೊಡನೆ(ಸ) ಮಾತನಾಡಿ ಉತ್ತರಿಸುವುದಾಗಿ ತಿಳಿಸಿದರು. ಬಿಲಾಲ್(ರ) ಮದೀನಕ್ಕೆ ಮರಳಿದರು. ಬಿಲಾಲ್(ರ) ತಲುಪಿದ ಕೆಲವು ದಿನಗಳ ಬಳಿಕ ಯಮನ್‌ನ ಕೆಲವರು ಪ್ರವಾದಿವರ್ಯರನ್ನು(ರ) ಭೇಟಿಯಾಗಿ ಹೀಗೆ ಹೇಳಿದರು.

'ನಾವು ಯಮನ್‌ನವರು. ಬಿಲಾಲ್‌ರ(ರ) ಬಗ್ಗೆ ಹೆಚ್ಚಿನ ವಿವರ ತಿಳಿದುಕೊಳ್ಳಬೇಕೆಂದು ಬಯಸಿದ್ದೇವೆ. ಅವರು ನಮ್ಮ ಸಹೋದರಿ ಹಿಂದ್‌ಳನ್ನು ವಿವಾಹವಾಗಲಿಚ್ಛಿಸಿದ್ದಾರೆ. ನಿಮ್ಮ ಅಭಿಪ್ರಾಯ ತಿಳಿಯುವ ವರೆಗೆ ಕಾಯಬೇಕೆಂದು ತಿಳಿಸಿದ್ದೇವೆ?'

"ನೀವೆಲ್ಲಿ? ಆ ಬಿಲಾಲ್ ಎಲ್ಲಿ? ಸ್ವರ್ಗದ ವಾರೀಸುದಾರನಾದ ಆ ಮನುಷ್ಯನ ಸ್ಥಾನವನ್ನು ನೋಡುವಾಗ ನಿಮ್ಮ ಸ್ಥಾನ ಯಾವುದು?" ಎಂದು ಪ್ರವಾದಿವರ್ಯರು(ಸ) ಅಭಿಮಾನದಿಂದ ಹೇಳಿದರು.

ದೇವ ಸಂದೇಶವಾಹಕರ ಬಳಿ ಬಿಲಾಲ್‌ರಿಗೆ(ರ) ಎಂತಹ ಉನ್ನತ ಸ್ಥಾನವಿದೆ ಎಂದು ತಿಳಿದ ಯಮನಿಗರು ತಮ್ಮ ಸಹೋದರಿಯನ್ನು ಸಂತೋಷದಿಂದ ಬಿಲಾಲ್‌ರಿಗೆ(ರ) ವಿವಾಹ ಮಾಡಿಕೊಟ್ಟರು. ಹೀಗೆ ಖವ್ಲಾನ್ ಗೋತ್ರದ ಹಿಂದ್ ಬಿಲಾಲ್‌ರ(ರ) ನವವಧುವಾದರು.

ಬದ್ರ್ ಯುದ್ಧದ ಬಳಿಕ ಬಿಲಾಲ್‌ರು(ರ) ಪ್ರವಾದಿಯವರ(ಸ) ಖಜಾನೆಯ ಕಾವಲುಗಾರ ರಾದರು. ಯುದ್ಧಾನಂತರ ಲಭಿಸಿದ ಸೊತ್ತುಗಳ ವಿಷಯದಲ್ಲಿ ಭಿನ್ನಾಭಿಪ್ರಾಯ ಮೂಡಿದಾಗ ಅಲ್ಲಾಹನು ಬಹಳ ಸ್ಪಷ್ಟವಾಗಿ ತೀರ್ಪು ನೀಡಿದನು.

'ನಿಮಗೆ ಯುದ್ಧದಿಂದ ಏನಾದರೂ ಸಂಪತ್ತು ಲಭಿಸಿದ್ದರೆ ಅದರ ಐದನೆಯ ಒಂದಂಶವು ಅಲ್ಲಾಹನಿಗೆ, ಅವನ ಸಂದೇಶವಾಹಕರಿಗೆ, ಸಂಬಂಧಿಕರಿಗೆ, ಅನಾಥರಿಗೆ, ನಿರ್ಗತಿಕರಿಗೆ ಮತ್ತು ಪ್ರಯಾಣಿಕರಿಗಾಗಿರುತ್ತದೆ ಎಂಬುದು ನಿಮಗೆ ತಿಳಿದಿರಬೇಕು.'

ರಾಷ್ಟ್ರದ ಖಜಾನೆಗೆ ತಲುಪುತ್ತಿದ್ದ ಸಂಪತ್ತನ್ನು ರಕ್ಷಿಸುವ ಹಾಗೂ ವಿತರಿಸುವ ಹೊಣೆಯು ಬಿಲಾಲ್‌ರದ್ದಾಗಿತ್ತು(ರ). ಸಮಾಜದಲ್ಲಿ ಹಣದ ಅವಶ್ಯತೆಯಿರುವವರು ಉಳಿದಿರದಿದ್ದರೆ ಮಾತ್ರ ಬೊಕ್ಕಸದಲ್ಲಿ ಹಣ ಉಳಿಯುತ್ತಿತ್ತು. ಜನರ ಮೂಲಭೂತ ಅವಶ್ಯಕತೆಯನ್ನು ಸಂಪೂರ್ಣವಾಗಿ ಪೂರೈಸಿದ ಬಳಿಕ ಉಳಿದ ಹಣವನ್ನು ಖಜಾನೆಯಲ್ಲಿರಿಸಬೇಕು ಎಂದು ಪ್ರವಾದಿವರ್ಯರು(ಸ) ಹೇಳಿದ್ದರು. ಆದ್ದರಿಂದ ಹೆಚ್ಚಿನ ಸಂದರ್ಭಗಳಲ್ಲಿ ಬೊಕ್ಕಸವು ಖಾಲಿಯಾಗಿರುತ್ತಿತ್ತು.

ಬಿಲಾಲ್ ಮತ್ತು ಕೆಲವು ಸಹಾಬಿಗಳು ತಮ್ಮ ತರಬೇತಿ ಹಾಗೂ ಕಲಿಕೆಗಾಗಿ ಪ್ರವಾದಿಯವರ(ಸ) ಮಸೀದಿಯಲ್ಲೇ ಹೆಚ್ಚು ಸಮಯ ಕಳೆಯುತ್ತಿದ್ದರು. ಅವರನ್ನು ಅಸ್ಹಾಬುಸುಫ್ಫ(ದಿಣ್ಣೆಯವರು) ಎಂದು ಕರೆಯಲಾಗುತ್ತಿತ್ತು. ಅಬೂಹುರೈರ, ಮಸ್‌ಊದ್, ಸುಹೈಬ್ ಹಾಗೂ ಅಮ್ಮಾರ್ ಮೊದಲಾದವರು ಅದರಲ್ಲಿ ಸೇರಿದ್ದಾರೆ. ದೇವಸ್ಮರಣೆ, ಕುರ್‌ಆನ್ ಪಾರಾಯಣ, ಅಧ್ಯಯನ, ಚರ್ಚೆ ಇತ್ಯಾದಿ ತಮ್ಮ ಜ್ಞಾನವರ್ಧನೆಗಾಗಿ ಅವರು ಮಸೀದಿಯ ದಿಣ್ಣೆಯಲ್ಲಿ ಕುಳಿತುಕೊಳ್ಳುತ್ತಿದ್ದರು. ಅಲ್ಲಿನ ಪರಿಸರದಲ್ಲಿ ಜೀವ ತುಂಬಿಸುವಲ್ಲಿ ಅವರ ಪಾಲಿದೆ. ಪ್ರವಾದಿವರ್ಯರ(ಸ) ವಿಶೇಷ ಮೇಲ್ನೋಟ, ಕಾಳಜಿ ಆ ದೇವದಾಸರಿಗೆ ಲಭಿಸಿತು. ಪ್ರವಾದಿಯವರೊಂದಿಗಿನ(ಸ) ಈ ಒಡನಾಟ ಜೀವನದಲ್ಲಿ ಉನ್ನತ ಮೌಲ್ಯಗಳನ್ನು ರೂಢಿಸಿಕೊಳ್ಳಲು ಅವರಿಗೆ ಸಹಾಯಕವಾಯಿತು.

ವಿವಾಹಾನಂತರ ಬಿಲಾಲ್(ರ) ತನ್ನ ವಾಸವನ್ನು ಮನೆಗೆ ಸ್ಥಳಾಂತರಿಸಿದರೂ ಪ್ರವಾದಿಯವರನ್ನು(ಸ) ಭೇಟಿಯಾಗುವ ಅತಿಥಿಗಳನ್ನು ಸ್ವಾಗತಿಸಲು, ಸತ್ಕರಿಸಲು ತಪ್ಪದೆ ಹಾಜರಾಗುತ್ತಿದ್ದರು. ಖಜಾನೆಯ ಸಂರಕ್ಷಣೆಯೊಂದಿಗೆ ದುರ್ಬಲರು ಹಾಗೂ ಅನಾಥರನ್ನು ನೋಡಿಕೊಳ್ಳುವ ತನ್ನ ಕೆಲಸವನ್ನು ಅತ್ಯುತ್ತಮವಾಗಿ ನಿರ್ವಹಿಸಿದರು. ವಿಶೇಷ ಸುದ್ದಿಗಳನ್ನು ತಿಳಿಸುವ ಹಾಗೂ ಯುದ್ಧಕ್ಕೆ ಸಂಬಂಧಿಸಿದ ವಿಷಯಗಳನ್ನು ಘೋಷಿಸುವ ಜವಾಬ್ದಾರಿಯೂ ಅವರಿಗಿತ್ತು. ಹೀಗೆ ದೇವಭಕ್ತ ಹಾಗೂ ಉನ್ನತ ವ್ಯಕ್ತಿತ್ವದ ಮಾದರಿಯನ್ನು ಲೋಕವು ಕಂಡಿತು. ಅತ್ಯಂತ ಕೆಳದರ್ಜೆಯಿಂದ ಅತ್ಯುನ್ನತಿಗೇರಿದ ಅದೃಷ್ಟವಂತರವರು. ಹೀಗೆ ಗುಲಾಮಗಿರಿಯಿಂದ ಮಹೋನ್ನತವಾದ ವಿಜಯ ಪೀಠದೆಡೆಗೆ ಸಾಗಿದವರು ಮಾನವ ಇತಿಹಾಸದಲ್ಲಿ ಬೇರೆ ಯಾರೂ ಇರಲಾರರು.

# ಪುನಃ ಮಕ್ಕಾದಲ್ಲಿ

**ಒಂ**ದು ದಿನ ಮುಸ್ಲಿಮರೆಲ್ಲರೂ ಮದೀನದ ಮಸೀದಿಯಲ್ಲಿ ಸೇರಿದ್ದರು. ಆಗ ಪ್ರವಾದಿ ಮುಹಮ್ಮದ್‌ರು(ಸ) ತಾವು ಕಂಡ ಕನಸನ್ನು ಅವರ ಮುಂದಿಟ್ಟರು. ಯಾರ ಭಯವೂ ಇಲ್ಲದೆ ನಿರಾಯುಧವಾಗಿ ಕೇಶ ಮುಂಡನ ಮಾಡಿ ಮಕ್ಕಾದ ಪವಿತ್ರ ಭವನಕ್ಕೆ ಪ್ರವೇಶಿಸಲಿದ್ದೇವೆ ಎಂಬುದು ಅವರ ಕನಸಿನ ಸಾರವಾಗಿತ್ತು. ಮಕ್ಕಾ ನಗರ ಹಾಗೂ ಅಲ್ಲಿನ ಆರಾಧನಾ ಕರ್ಮಗಳನ್ನು ನಿರ್ವಹಿಸುವ ಮಹದಾಸೆಯನ್ನು ಮನದಲ್ಲಿ ಅದುಮಿಟ್ಟಿದ್ದ ಮುಸ್ಲಿಮರಲ್ಲಿ ಹೊಸ ನಿರೀಕ್ಷೆಯು ಹುಟ್ಟಿಕೊಂಡಿತು.

ಅವರು ಪವಿತ್ರ ಕಅಬಾಕ್ಕೆ ವಿದಾಯ ಹೇಳಿ 6 ವರ್ಷಗಳೇ ಕಳೆದಿದ್ದವು. ಮುಹಾಜಿರ್‌ರಿಗೆ ತಮ್ಮ ಧಾರ್ಮಿಕ ಕರ್ತವ್ಯಗಳನ್ನು ನಿರ್ವಹಿಸಲಾಗದ ಮನೋವ್ಯಥೆ ವರ್ಣಿಸಲಸಾಧ್ಯವಾಗಿತ್ತು. ಹುಟ್ಟಿ ಬೆಳೆದ ಮಣ್ಣಿನ ಮೇಲಿನ ಮೋಹ ತೀವ್ರವಾಗಿತ್ತು. ಕಳೆದ ಯುದ್ಧಗಳಲ್ಲಿನ ವಿಜಯವು ಕಅಬಾಕ್ಕೆ ಪ್ರವೇಶಿಸಲು ಇರುವ ಸ್ಪಷ್ಟ ಸೂಚನೆಯೆಂದು ಅವರು ಭಾವಿಸಿದ್ದರು. ಆದ್ದರಿಂದ ಆ ದಿನದ ಬರುವಿಕೆಗಾಗಿ ಆಸೆಯಿಂದ ನಿರೀಕ್ಷಿಸುತ್ತಿದ್ದರು.

ಕಅಬಾ ಮಾನವ ಸಮಾಜದ ಸಾರ್ವಜನಿಕ ಸೊತ್ತಾಗಿದೆ. ಅಲ್ಲಿ ಪ್ರಾರ್ಥನೆ ಹಾಗೂ ಪ್ರದಕ್ಷಿಣೆ ಮಾಡುವ ಹಕ್ಕು ಎಲ್ಲರಿಗೂ ಇದೆ. ಏಕದೇವತ್ವವನ್ನು ಸಂಸ್ಥಾಪಿಸುವುದೇ ಕಅಬಾ ಭವನ ಸ್ಥಾಪನೆಯ ಉದ್ದೇಶವಾಗಿತ್ತು. ಆದರೆ ಏಕದೇವತ್ವದೆಡೆಗೆ ಜನರನ್ನು ಆಹ್ವಾನಿಸುತ್ತಿದ್ದಾರೆಂಬ ಒಂದೇ ಕಾರಣಕ್ಕಾಗಿ ಕುರೈಶರು ಮುಸ್ಲಿಮರನ್ನು ಕಅಬಾದ ಸಮೀಪ ಸುಳಿಯಲು ಅವಕಾಶ ನೀಡಿರಲಿಲ್ಲ. ಈ ಅನ್ಯಾಯವು ಕೊನೆಗೊಂಡು ಪವಿತ್ರ ಯಾತ್ರೆ ಕೈಗೊಳ್ಳುವಂತಾಗಬೇಕೆಂದು ಮುಸ್ಲಿಮರು ಆಶಿಸಿದ್ದರು. ಪ್ರವಾದಿವರ್ಯರ(ಸ) ಕನಸಿನ ವಿಷಯ ತಿಳಿದು ಅವರ ಮೋಹವು ತೀವ್ರವಾಯಿತು.

ಪ್ರತಿಷ್ಠಿತ ತಿಂಗಳಾದ ದುಲ್‌ಕಅದ್ ತಿಂಗಳಲ್ಲಿ ಮಕ್ಕಾಕ್ಕೆ ಹೊರಡುವುದೆಂದು ಪ್ರವಾದಿವರ್ಯರು(ಸ) ತೀರ್ಮಾನಿಸಿದರು. ರಕ್ತಪಾತವಾಗದೆ ಸಂದರ್ಶನ ನಡೆಸಬೇಕೆಂಬುದು ಪ್ರವಾದಿಯವರ(ಸ) ಆಶೆಯಾಗಿತ್ತು. ಪವಿತ್ರ ಹಜ್ಜ್ ಕರ್ಮವನ್ನು ನಿರ್ವಹಿಸುವುದನ್ನು

ತಡೆಯಲಾರರು ಹಾಗೂ ಯುದ್ಧ ನಿಷಿದ್ಧವಾದ ಪ್ರತಿಷ್ಠಿತ ತಿಂಗಳಿನಲ್ಲಿ ಯುದ್ಧ ಮಾಡಲಾ
ರೆಂದು ಪ್ರವಾದಿವರ್ಯರು(ಸ) ಭಾವಿಸಿದ್ದರು. ಆದ್ದರಿಂದ ಹಜ್ಜ್ ಯಾತ್ರೆಯ ವಿಷಯವನ
ಎಲ್ಲರಿಗೂ ತಿಳಿಸಲಾಯಿತು. ಹೀಗೆ 1400 ಮಂದಿ ಅನುಯಾಯಿಗಳೊಂದಿಗೆ ಪ್ರವಾದಿ
ವರ್ಯರು(ಸ) ಪ್ರಯಾಣವನ್ನು ಆರಂಭಿಸಿದರು. ಏಳುನೂರರಷ್ಟು ಬಲಿ ಪ್ರಾಣಿಗಳ
ಇದ್ದವು. ದುಲ್‌ಹಲೀಫ಼ ಎಂಬಲ್ಲಿ ಅವರು ಇಹ್ರಾಮ್ ಧರಿಸಿದರು. ಬಿಲಾಲ್ ಕೂಡಾ ಈ
ತಂಡದಲ್ಲಿದ್ದರು. ಪ್ರವಾದಿಯವರ(ಸ) ನಿಕಟವರ್ತಿಯೂ ಮಕ್ಕಾದ ಅಭಿಮಾನಿಯೂ ಆಗಿದ
ಬಿಲಾಲ್‌ರು ಆ ಪವಿತ್ರ ಯಾತ್ರೆಯಿಂದ ದೂರವುಳಿಯಲು ಸಾಧ್ಯವೇ?

ಮುಸ್ಲಿಮರ ಕಅಬಾ ಸಂದರ್ಶನದ ವಿಷಯ ತಿಳಿದ ಕುರೈಶರು ಅದನ್ನು ತಡೆಯಲು
ನಿರ್ಧರಿಸಿದರು. ಯುದ್ಧದ ಸಿದ್ಧತೆ ಆರಂಭವಾಯಿತು. ಮುಸ್ಲಿಮರು ಹುದೈಬಿಯಾ ಎಂಬ
ಸ್ಥಳದಲ್ಲಿ ತಂಗಿದರು. ನಂತರ ಹಲವು ಸುತ್ತಿನ ಮಾತುಕತೆ ನಡೆದು ಸಂಧಾನವೇರ್ಪಟ್ಟಿತು
ಅದರ ಶರತ್ತುಗಳೆಲ್ಲಾ ಮುಸ್ಲಿಮರಿಗೆ ಕಷ್ಟಕರವಾಗಿ ಭಾಸವಾಗುತ್ತಿದ್ದರೂ ಅಂತಿಮ ವಿಜಯವ
ಮುಸ್ಲಿಮರಿಗೆ ಲಭಿಸುವಂತಿತ್ತು.

ಹುದೈಬಿಯಾ ಸಂಧಿ ಪೂರ್ಣಗೊಂಡ ಬಳಿಕ ಮುಸ್ಲಿಮರು ಮದೀನಕ್ಕೆ ಮರಳಿದರು
ಪವಿತ್ರ ಕಅಬಾ ಸಂದರ್ಶಿಸಲು ಸಾಧ್ಯವಾಗದ ನಿರಾಶೆ ಎಲ್ಲರಲ್ಲೂ ಮಡುಗಟ್ಟಿತ್ತು. ಆದರೂ
ಎಲ್ಲ ದುಃಖವನ್ನೂ ನುಂಗಿಕೊಂಡು ಇಸ್ಲಾಮೀ ಸಂದೇಶ ಪ್ರಚಾರದಲ್ಲಿ ನಿರತರಾದರು
ಇದರಿಂದ ಒಂದು ವರ್ಷದೊಳಗೆ ಅಲ್ಲಿ ಮಹತ್ವಪೂರ್ಣವಾದ ಬದಲಾವಣೆಗಳುಂಟಾದವು
ವಿವಿಧ ದೇಶಗಳ ರಾಜರನ್ನು ಇಸ್ಲಾಮಿಗೆ ಆಹ್ವಾನಿಸಿ ಪತ್ರಗಳನ್ನು ರವಾನಿಸಿದ್ದು ಮತ್ತ
ಖೈಬರ್ ಯುದ್ಧದಲ್ಲಿ ಜಯಗಳಿಸಿದ್ದು ಇದೇ ಸಂದರ್ಭದಲ್ಲಾಗಿತ್ತು.

ಹುದೈಬಿಯಾ ಸಂಧಿಯ ನಿಯಮದಂತೆ ಮುಂದಿನ ವರ್ಷ ಉಮ್ರಾ ನಿರ್ವಹಿಸಲು
ಮುಸ್ಲಿಮರಿಗೆ ಅವಕಾಶ ದೊರೆಯಿತು. ಎರಡು ಸಾವಿರ ಸತ್ಯವಿಶ್ವಾಸಿಗಳು ಕಅಬಾ ಸಂದರ್ಶಿಸಿ
ಆರಾಧನಾ ಕರ್ಮವನ್ನು ನಿರ್ವಹಿಸಿದರು. ಈ ಭೇಟಿಯಿಂದ ಮಕ್ಕಾದವರನ್ನು ಆಕರ್ಷಿಸಲು
ಸಾಧ್ಯವಾಯಿತು. ಖಾಲಿದ್ ಬಿನ್ ವಲೀದ್‌ರಂತಹ ಮಹಾನ್ ವ್ಯಕ್ತಿಗಳು ಕೂಡಾ ಇಸ್ಲಾಮ
ಸ್ವೀಕರಿಸಲು ಪ್ರವಾದಿಯವರ ಮಕ್ಕಾ ಸಂದರ್ಶನ ಕಾರಣವಾಯಿತು. ಮಕ್ಕಾದ ಪ್ರಸಿ
ಕುದುರೆ ಸವಾರನಾಗಿದ್ದ ಅವರು ಹೇಳಿದರು: 'ಮುಹಮ್ಮದ್ ಮಂತ್ರವಾದಿಯೋ ಕವಿಯೊ
ಅಲ್ಲವೆಂದು ಬುದ್ಧಿಯಿರುವ ಎಲ್ಲರಿಗೂ ತಿಳಿದಿದೆ. ಅವರ ವಚನ ದೈವಿಕವಾದುದು
ಆದ್ದರಿಂದ ಅವರನ್ನು ಅನುಸರಿಸುವುದು ವಿವೇಕವಂತರ ಕರ್ತವ್ಯವಾಗಿದೆ.'

'ಖಾಲಿದ್! ನೀವೂ ಭ್ರಷ್ಟರಾದಿರಾ?' ಅಬೂಜಹಲರ ಮಗ ಇಕ್ರಿಮಾ ಕೇಳಿದ.

'ಇಲ್ಲ, ನಾನು ಮುಸ್ಲಿಮನಾದೆ?' –ಖಾಲಿದ್ ಹೇಳಿದರು.

'ಕುರೈಶರಲ್ಲಿ ಬೇರೆ ಯಾರೂ ಈ ರೀತಿ ಹೇಳಿದ್ದರೂ ಆಗಬಹುದಿತ್ತು. ಆದರೆ ನೀವು ಹೀಗೆ ಹೇಳುವುದೆಂದರೆ?' ಇಕ್ರಿಮಾ ಹೇಳಿದ.

'ಅದಕ್ಕೆ ಕಾರಣವೇನು?'

'ನಿಮ್ಮ ತಂದೆಯನ್ನು ಗಾಯಗೊಳಿಸಿ ಅವರ ಅಭಿಮಾನವನ್ನು ಹರಿದು ಚಿಂದಿ ಮಾಡಲಾಯಿತು ಹಾಗೂ ಬದ್ರ್‌ನಲ್ಲಿ ನಿಮ್ಮ ಚಿಕ್ಕಪ್ಪನನ್ನೂ ಅವರ ಪುತ್ರನನ್ನೂ ವಧಿಸಲಾಯಿತು. ದೇವನಾಣೆ! ನಾನಂತೂ ಮುಸ್ಲಿಮನಾಗಲಾರೆ' ಇಕ್ರಿಮಾ ಕುಟುಂಬ ಪಕ್ಷಪಾತವನ್ನು ಕೆರಳಿಸಲು ಯತ್ನಿಸಿದರು. ಆದರೆ ಖಾಲಿದ್‌ರ ವಿಶ್ವಾಸ ಅದನ್ನು ಮೀರಿಸುವಂತಿತ್ತು. ಅವರು ಹೇಳಿದರು: ಇದು ಪೂರ್ವ ನಂಬಿಕೆಯ ಹಾಗೂ ಇಸ್ಲಾಮಿನೊಂದಿಗಿನ ಪೂರ್ವದ್ವೇಷದ ವಿಕಾರವಾಗಿದೆ. ಆದರೆ ಅಲ್ಲಾಹನಾಣೆ! ಸತ್ಯವು ಸ್ಪಷ್ಟವಾಗಿರುವುದರಿಂದ ನಾನು ಮುಸ್ಲಿಮನಾಗಿದ್ದೇನೆ.'

ಖಾಲಿದ್‌ರು ಇಸ್ಲಾಮ್ ಸ್ವೀಕರಿಸಿದ ವಿಷಯ ತಿಳಿದ ಅಬೂ ಸುಫ್‌ಯಾನ್ ಕೇಳಿದರು. ನಾನು ಕೇಳಿದ ವಿಷಯ ನಿಜವೇ?

'ಹೌದು.'

'ಲಾತ, ಉಝ್ಝಾನಾಣೆ! ನೀನು ಹೇಳುತ್ತಿರುವುದು ನಿಜವೆಂದಾದರೆ ಮುಹಮ್ಮದ್‌ಗಿಂತ ಮೊದಲು ನಿನ್ನ ಕಥೆ ಮುಗಿಸುತ್ತೇನೆ' ಕುಪಿತನಾದ ಅಬೂ ಸುಫ್‌ಯಾನ್ ಕಿರುಚಿದ.

"ಅಲ್ಲಾಹನಾಣೆ! ಯಾರು ಏನು ಮಾಡಿದರೂ ನಾನು ಇಸ್ಲಾಮ್ ಸ್ವೀಕರಿಸಿರುವುದು ಸತ್ಯ." ಖಾಲಿದ್‌ರ ಮಾತುಗಳನ್ನು ಕೇಳಿ ಅಬೂ ಸುಫ್‌ಯಾನ್ ಅವರನ್ನು ಹಿಡಿಯಲು ಪ್ರಯತ್ನಿಸಿದ. ತಟ್ಟನೆ ಇಕ್ರಿಮಾ ಮಧ್ಯ ಪ್ರವೇಶಿಸಿ ಹೇಳಿದರು: 'ಅಬೂಸುಫ್‌ಯಾನ್, ಖಾಲಿದ್ ಇಸ್ಲಾಮ್ ಸ್ವೀಕರಿಸಿದ್ದಕ್ಕಾಗಿ ನೀವವನನ್ನು ಕೊಲ್ಲಬಯಸುತ್ತೀರಾ? ಕುರೈಶರು ಈಗಲೇ ಮುಹಮ್ಮದ್‌ನನ್ನು ಅಂಗೀಕರಿಸಿದ್ದಾರೆ. ಕೇವಲ ಒಂದು ವರ್ಷದ ಒಳಗೆ ಇಡೀ ಮಕ್ಕಾದ ಜನತೆಯೇ ಮುಹಮ್ಮದ್‌ರ ಅನುಯಾಯಿಗಳಾಗುವರೆಂದು ನಾನು ಭಯಪಡುತ್ತೇನೆ.'

ಇಕ್ರಿಮಾರ ಭಯವು ನಿಜವೇ ಆಗಿತ್ತು. ಏಕೆಂದರೆ ಇಸ್ಲಾಮ್ ಶೀಘ್ರ ಗತಿಯಲ್ಲಿ ಬೆಳೆಯುತ್ತಿತ್ತು. ಹುದೈಬಿಯಾ ಸಂಧಿಗೆ ಒಂದು ವರ್ಷವಾಗುತ್ತಲೇ ಇಸ್ಲಾಮ್ ಅರೇಬಿಯಾದ ಅಜೇಯ ಶಕ್ತಿಯಾಗಿ ಬೆಳೆಯಿತು. ಆದರೂ ಮಕ್ಕಾವನ್ನು ಜಯಿಸಬೇಕೆಂದು ಮುಸ್ಲಿಮರು ಆತುರ ತೋರಲಿಲ್ಲ. ಅವರಿಗೆ ಅಧಿಕಾರದ ಮೇಲೆ ಆಶೆಯಿರಲಿಲ್ಲವೆಂದಲ್ಲ, ಹುದೈಬಿಯಾ ಸಂಧಿಯ ಉಲ್ಲಂಘನೆ ಹಾಗೂ ವಚನ ಭ್ರಷ್ಟತೆಯು ನಿಷಿದ್ಧವಾದುದಲ್ಲವೆ?

ಆದರೆ ಹೆಚ್ಚು ಸಮಯವಾಗಿರಲಿಲ್ಲ, ಕುರೈಶರೇ ಕರಾರು ಉಲ್ಲಂಘಿಸಿದರು. ಹುದೈಬಿಯಾ ಸಂಧಿಯನ್ನು ಉಲ್ಲಂಘಿಸಿದವರಲ್ಲಿ ಇಕ್ರಿಮಾ ಮುಂಚೂಣಿಯಲ್ಲಿದ್ದರು. ಕುರೈಶ್ ಪ್ರಮುಖರು ಭವಿಷ್ಯದ ಬಗ್ಗೆ ಭಯಭೀತರಾಗಿದ್ದರಿಂದ ಉಲ್ಲಂಘನೆಯನ್ನು

ವಿರೋಧಿಸುತ್ತಿದ್ದರು. ಅವರು ಪರಿಹಾರ ಮಾರ್ಗದ ಬಗ್ಗೆ ಸಮಾಲೋಚಿಸಿದರು. ಕೊನೆಗೆ ಅಬೂ ಸುಫ್‌ಯಾನ್‌ರನ್ನು ಹುದೈಬಿಯಾ ಸಂಧಿಯನ್ನು ನವೀಕರಿಸಲು ಕಳುಹಿಸುವುದೆಂದು ತೀರ್ಮಾನಿಸಲಾಯಿತು. ಮಕ್ಕಾದವರ ಪ್ರತಿನಿಧಿಯಾಗಿ ಮದೀನಕ್ಕೆ ಆಗಮಿಸಿದ ಅಬೂ ಸುಫ್‌ಯಾನ್‌ಗೆ ಪ್ರವಾದಿಯವರನ್ನು ನೇರವಾಗಿ ಭೇಟಿಯಾಗುವ ಧೈರ್ಯವಿರಲಿಲ್ಲ. ಆದ್ದರಿಂದ ತನ್ನ ಮಗಳು ಹಾಗೂ ಪ್ರವಾದಿ ಪತ್ನಿಯಾಗಿದ್ದ ಉಮ್ಮು ಹಬೀಬರ ಬಳಿ ತೆರಳಿ ವಿಷಯ ತಿಳಿಸುವುದೆಂದು ತೀರ್ಮಾನಿಸಿದರು.

ಮಗಳ ಮನೆಗೆ ತಲುಪಿದ ಅಬೂ ಸುಫ್‌ಯಾನ್ ಒಳಪ್ರವೇಶಿಸಿ ಪ್ರವಾದಿವರ್ಯರ(ಸ) ಹಾಸಿನಲ್ಲಿ ಕುಳಿತುಕೊಳ್ಳಬೇಕೆಂದಿರುವಾಗ ಉಮ್ಮು ಹಬೀಬಾ ಆ ಹಾಸನ್ನು ಮಡಚಿಟ್ಟರು. ಆಶ್ಚರ್ಯಚಕಿತನಾದ ಅಬೂ ಸುಫ್‌ಯಾನ್ ಕಾರಣ ಕೇಳಿದಾಗ ಅವರು ಹೇಳಿದರು: 'ಇದು ಅಲ್ಲಾಹನ ಪ್ರವಾದಿಯ ಹಾಸು ಇದರಲ್ಲಿ ಅವಿಶ್ವಾಸಿಯೂ ಬದ್ಧ ವೈರಿಯೂ ಆದ ತಾವು ಕುಳಿತುಕೊಳ್ಳುವುದು ನನಗಿಷ್ಟವಿಲ್ಲ.' ಕೋಪಾತಿರೇಕದಿಂದ ಅಬೂ ಸುಫ್‌ಯಾನ್ ಮಗಳನ್ನು ಬೈಯುತ್ತಾ ಹೊರನಡೆದರು. ಅಲ್ಲಿಂದ ನೇರವಾಗಿ ಪ್ರವಾದಿಯವರ(ಸ) ಬಳಿಗೆ ಬಂದು ಕರಾರು ಮುಂದುವರಿಸುವಂತೆ ವಿನಂತಿಸಿದರು. ಪ್ರವಾದಿವರ್ಯರು(ಸ) ಅವರನ್ನು ಗಮನಿಸಲೇ ಇಲ್ಲ. ಆಗ ಪ್ರವಾದಿಯೊಂದಿಗೆ ಶಿಫಾರಸು ಮಾಡುವಂತೆ ಅಬೂಬಕರ್, ಉಮರ್, ಅಲಿ, ಫಾತಿಮಾ ಮೊದಲಾದವರೊಂದಿಗೆ ವಿನಂತಿಸಿದರು. ಆದರೆ ಯಾರೂ ಅದಕ್ಕೆ ಸಿದ್ಧರಾಗಲಿಲ್ಲ. ಅವರು ಇಸ್ಲಾಮಿನ ಹಿತಕ್ಕೆ ವಿರುದ್ಧವಾಗಿ ಪ್ರವಾದಿಯವರೊಡನೆ ಮಾತುಕತೆ ನಡೆಸಿಯಾರೇ? ಅಬೂಸುಫ್‌ಯಾನ್ ಬೇರೆ ದಾರಿ ಕಾಣದೆ ಪುನಃ ಮಕ್ಕಾಕ್ಕೆ ಮರಳಿದರು. ವಿಷಯ ತಿಳಿದ ಮಕ್ಕಾದ ಕುರೈಶರು ನಿರಾಶರಾದರು.

ಶತ್ರುಗಳಿಗೆ ತಮ್ಮನ್ನು ಎದುರಿಸುವ ಅವಕಾಶ ನೀಡದೆ ಮಕ್ಕಾವನ್ನು ತಮ್ಮ ಅಧೀನಕ್ಕೊಳಪಡಿಸಬೇಕೆಂಬುದು ಪ್ರವಾದಿವರ್ಯರ(ಸ) ಬಯಕೆಯಾಗಿತ್ತು. ಇದಕ್ಕೆ ಯುದ್ಧವನ್ನು ಗೆಲ್ಲುವ ಸಾಮರ್ಥ್ಯ ಇಲ್ಲದಿರುವುದೋ ಅಥವಾ ವಿಜಯ ಸಾಧ್ಯತೆಯಿಲ್ಲದಿರುವುದೋ ಕಾರಣವಾಗಿರಲಿಲ್ಲ, ಬದಲಾಗಿ ರಕ್ತ ರಹಿತ ಕ್ರಾಂತಿ ಪ್ರವಾದಿವರ್ಯರ(ಸ) ಇಂಗಿತವಾಗಿತ್ತು. ಆದ್ದರಿಂದ ಸುಸಜ್ಜಿತ ಸೈನ್ಯವನ್ನು ಸಜ್ಜುಗೊಳಿಸಿದ ಬಳಿಕವೇ ಮಕ್ಕಾಕ್ಕೆ ಪಥ ಸಂಚಲನ ಮಾಡುವ ವಿಷಯವನ್ನು ಅನುಯಾಯಿಗಳಿಗೆ ತಿಳಿಸಿದರು.

ಹೀಗೆ ಮಕ್ಕಾವನ್ನು ವಶಪಡಿಸಲು ಸಾವಿರಾರು ಮುಸ್ಲಿಮರು ಮಕ್ಕಾಕ್ಕೆ ತೆರಳಿದರು. ಕಳೆದ ಎರಡು ಮೂರು ವರ್ಷಗಳಿಂದ ಅವರು ಆ ದಿನಕ್ಕಾಗಿ ಕಾದಿದ್ದರು. ಗೂಡುಬಿಟ್ಟು ಹೋದ ಪಕ್ಷಿ ಮರಳಿ ಗೂಡಿಗೆ ಬರಲು ಆಸೆಪಟ್ಟಂತೆ, ಅನ್ಯಾಯವಾಗಿ ಹೊಡೆದೋಡಿಸಲ್ಪಟ್ಟ ಮುಹಾಜಿರ್‌ಗಳು ವಿಜಯಿಗಳಾಗಿ ಹಿಂದಿರುಗಬೇಕೆಂದು ಆಶೆಪಟ್ಟರು. ಇಂತಹ ಬೃಹತ್ ಸೈನ್ಯವನ್ನು ಮದೀನಾ ಈ ಮೊದಲು ಎಂದೂ ಕಂಡಿರಲಿಲ್ಲ. ಅನ್ಸಾರ್‌ಗಳು ಹಾಗೂ

ಮುಹಾಜಿರ್‌ರೊಂದಿಗೆ ಇತರ ಕೆಲವು ಗೋತ್ರಗಳು ಸೇರಿಕೊಂಡವು. ಮಕ್ಕಾದೆಡೆಗೆ ಸಾಗಲು ಮರುಭೂಮಿಯಲ್ಲಿ ಹರಿದ ಆ ಬೃಹತ್ ಸೈನ್ಯದೊಂದಿಗೆ ಹೊಸ ಹೊಸ ತಂಡಗಳು ಸೇರ್ಪಡೆಗೊಂಡವು. ಅಲ್ಲಾಹನಿಗಲ್ಲದೆ ನಮ್ಮನ್ನು ಸೋಲಿಸಲು ಯಾರಿಗೂ ಸಾಧ್ಯವಿಲ್ಲವೆಂಬ ಆತ್ಮವಿಶ್ವಾಸ ಅವರನ್ನು ಮುಂದುವರಿಯಲು ಪ್ರೇರೇಪಿಸಿತು. ಒಂದು ರಕ್ತದ ಹನಿಯೂ ಉದುರದೆ ಪವಿತ್ರ ಭವನವನ್ನು ವಿಮೋಚನೆಗೊಳಿಸಬೇಕೆಂಬ ಅದಮ್ಯ ಬಯಕೆ ಅವರದ್ದಾಗಿತ್ತು.

ಇಸ್ಲಾಮೀ ಸೇನೆಯು ಮಕ್ಕಾಕ್ಕೆ ಸಮೀಪದ ಡೆಹ್ರಾನಿಗೆ ತಲುಪಿದಾಗ ಪ್ರವಾದಿವರ್ಯರ(ಸ) ಚಿಕ್ಕಪ್ಪ ಅಬ್ಬಾಸ್ ಹಾಗೂ ಕುಟುಂಬವು ಇಸ್ಲಾಮ್ ಸ್ವೀಕರಿಸಿ ಅವರೊಂದಿಗೆ ಸೇರಿಕೊಂಡರು. ನಂತರ ಅಬೂ ಸುಫ್‌ಯಾನ್, ಅಬ್ದುಲ್ಲಾ ಬಿನ್ ಅಬೂ ಉಮಯ್ಯ ಇಸ್ಲಾಮ್ ಸ್ವೀಕಾರಕ್ಕಾಗಿ ಪ್ರವಾದಿ ಸನ್ನಿಧಿಗೆ ತಲುಪಿದರು. ಆಗ ಪ್ರವಾದಿಯವರು(ಸ) ಅವರನ್ನು ಸ್ವಾಗತಿಸಲು ಸಿದ್ಧರಾಗಲಿಲ್ಲ.

'ನನಗೆ ಅವರನ್ನು ನೋಡುವ ಅಗತ್ಯವಿಲ್ಲ. ಅಬೂ ಸುಫ್‌ಯಾನ್‌ನಿಂದ ಬಹಳ ಕಿರುಕುಳ ಅನುಭವಿಸಿದೆ. ನನ್ನ ಪಿತೃಸಹೋದರಿಯ ಪುತ್ರನಾದ ಅಬ್ದುಲ್ಲಾ ಕೂಡಾ ಮಕ್ಕಾದಲ್ಲಿ ನಮ್ಮ ವಿರುದ್ಧ ಮಾಡಿದ ಪಿತೂರಿ ಅಷ್ಟಿಷ್ಟಲ್ಲ.'

ಪ್ರವಾದಿವರ್ಯರ(ಸ) ಪ್ರತಿಕ್ರಿಯೆ ತಿಳಿದ ಅಬೂಸುಫ್‌ಯಾನ್ ಹೇಳಿದರು: ಅವರು ನನಗೆ ಸಂದರ್ಶಿಸುವ ಅನುಮತಿ ನೀಡದಿದ್ದರೆ, ನಾನು ನನ್ನ ಮಗುವಿನೊಂದಿಗೆ ಮಕ್ಕಾದ ಮರುಭೂಮಿಯಲ್ಲಿ ಹಸಿದು ಬಾಯಾರಿ ಸಾಯುತ್ತೇನೆ. ವಿಷಯ ತಿಳಿದ ಪ್ರವಾದಿಯವರು(ಸ) ಭೇಟಿಯಾಗಲು ಅನುಮತಿಸಿದರು. ನಂತರ ಇಸ್ಲಾಮ್ ಸ್ವೀಕರಿಸಿದರು. ಇದರೊಂದಿಗೆ ಶತ್ರುಗಳ ಹೋರಾಟದ ನಿರೀಕ್ಷೆಯೂ ಹುಸಿಯಾಯಿತು. ಇಸ್ಲಾಮೀ ಸೇನೆಯ ಶಕ್ತಿ, ಸ್ಥೈರ್ಯ, ಭದ್ರತೆ ಹಾಗೂ ವಿಜಯ ಸಾಧ್ಯತೆಯು ಅಬೂ ಸುಫ್‌ಯಾನ್ ಇಸ್ಲಾಮ್ ಸ್ವೀಕರಿಸಲು ಕಾರಣವಾಯಿತೆಂಬುದು ಅವರ ಮಾತಿನಿಂದಲೇ ವ್ಯಕ್ತವಾಗುತ್ತದೆ. ಸುಸಜ್ಜಿತವಾದ ಮುಸ್ಲಿಮ್ ಸೇನೆಯನ್ನು ನೋಡಿ ಅವರು ಅಬ್ಬಾಸ್‌ರೊಡನೆ ಹೇಳಿದರು. ಅಬೂ ಫರ್ಝ್ಲ್! ಇವರೆಲ್ಲರೂ ಮೊದಲು ದುರ್ಬಲರಾಗಿದ್ದರು. ಯಾವುದೇ ಶಕ್ತಿಯಿರಲಿಲ್ಲ. ಆದರೆ ಈಗ ಅಲ್ಲಾಹನಾಣೆ, ನಿಮ್ಮ ಸಹೋದರನ ಭವಿಷ್ಯದ ಆಧಿಪತ್ಯವು ಉಜ್ವಲವಾಗಿರುತ್ತದೆ.

ಮುಸ್ಲಿಮ್ ಸೇನೆಯು ಮಕ್ಕಾ ಪ್ರವೇಶಿಸಿತು. ಹೇಳಬಹುದಾದಂತಹ ಯಾವುದೇ ರೀತಿಯ ಪ್ರತಿರೋಧ ನಡೆಯಲಿಲ್ಲ. ಮಕ್ಕಾಕ್ಕೆ ಮರಳಿದ ದಂಡ ಯಾತ್ರೆಯು ಮುಹಾಜಿರರ ಪಾಲಿಗೆ ಅತ್ಯಂತ ಸಂತೋಷದಾಯಕವಾಗಿತ್ತು. ಅದು ಅವರು ತಮ್ಮ ಜನ್ಮಭೂಮಿಗೆ ಮರಳಿದ ಸಂಭ್ರಮವಾಗಿತ್ತು.

ಬಿಲಾಲ್ ಹಿಂದ್ ಪರ್ವತದ ಎದುರಿನಲ್ಲಿರುವ ಮಕ್ಕಾದ ಅತಿ ಎತ್ತರದ ಸ್ಥಳದಲ್ಲಿ ನಿಂತು ಸುತ್ತಲೂ ಕಣ್ಣೋಡಿಸಿದರು. ಉಮಯ್ಯನ ಒಂಟೆಯ ಹಿಂದೆ ನಡೆದ ಪ್ರದೇಶಗಳನ್ನು

ಗಮನಿಸಿದರು. ತನ್ನನ್ನು ಅಂಗಾತ ಮಲಗಿಸಿ, ಎದೆಯಲ್ಲಿ ಕಲ್ಲು ಇಟ್ಟು, ಕುತ್ತಿಗೆಗೆ ಹಗ್ಗ ಕಟ್ಟಿ ಎಳೆದಾಡಿದ ಸ್ಥಳಗಳನ್ನು ಸಮ್ಮಿಶ್ರಭಾವದಿಂದ ವೀಕ್ಷಿಸಿದರು. ಎಂತೆಂತಹ ದೃಶ್ಯಗಳು!? ಶತ್ರುಗಳ ಕ್ರೂರ ಮರ್ದನಗಳು ಮೇರೆ ಮೀರಿದಾಗ ಅಭಯ ಪಡೆದ ಪರ್ವತ ಪ್ರದೇಶಗಳು, ಪ್ರಪ್ರಥಮವಾಗಿ ದೈವಿಕ ಪ್ರಕಾಶ ಲಭಿಸಿದ ಹಿರಾಗುಹೆಯಿರುವ ಗಿರಿಶಿಖರಗಳು, ತಗ್ಗು ಪ್ರದೇಶಗಳಲ್ಲಿ ಚದುರಿರುವ ಗುಡಿಸಲುಗಳು, ಅವೆಲ್ಲವುಗಳ ಮಧ್ಯೆ ಪವಿತ್ರ ದೇವಭವನ, ಅದರೊಂದಿಗಿನ ಗತಕಾಲದ ಸುಂದರ ಸ್ಮರಣೆಗಳು ಬಿಲಾಲ್‌ರ ಮನದಲ್ಲಿ ತುಂಬಿ ನಿಂತಿತು.

ಹೀಗೆ ಮರ್ದಿತರಾಗಿ, ಕ್ರೂರ ಪೀಡನೆಗಳಿಗೆ ಗುರಿಯಾಗಿ, ಜನ್ಮನಾಡನ್ನೇ ತ್ಯಜಿಸಬೇಕಾಗಿ ಬಂದ ಸತ್ಯವಿಶ್ವಾಸಿಗಳು ವಿಜಯ ಘೋಷಣೆಯೊಂದಿಗೆ ಪವಿತ್ರ ಭವನಕ್ಕೆ ಮರಳಿ ಬಂದರು. ಅವರೀಗ ದುರ್ಬಲರೂ ಅವಮಾನಿತರೂ ಆಗಿ ಉಳಿದಿಲ್ಲ. ಅವರ ಸಂತೋಷವು ವರ್ಣನಾತೀತವಾಗಿತ್ತು. ಆದರೆ ವಿಜಯವು ಅವರನ್ನು ಅಹಂಕಾರಿಗಳನ್ನಾಗಿಸಲಿಲ್ಲ. ಅವರ ಕಣ್ಣುಗಳಲ್ಲಿ ಆನಂದಬಾಷ್ಪ ಸುರಿಯುತ್ತಿತ್ತು. ತಮ್ಮ ಯಶಸ್ಸು ಹಾಗೂ ವಿಜಯಕ್ಕಾಗಿ ಅಲ್ಲಾಹನನ್ನು ಸ್ತುತಿಸಿದರು. ಕೇವಲ ಅವನು ವಹಿಸಿಕೊಟ್ಟ ಹೊಣೆಗಾರಿಕೆಯನ್ನು ನಿರ್ವಹಿಸುವ ಚಿಂತೆಯಲ್ಲದೆ ಯಾರೊಡನೆಯೂ ಪ್ರತೀಕಾರ ತೀರಿಸಬೇಕೆಂಬ ಬಯಕೆ ಅವರಿಗೆ ಇರಲಿಲ್ಲ.

ಹೀಗೆ ಸಹಸ್ರಾರು ಸಂಖ್ಯೆಯಲ್ಲಿ ಮುಸ್ಲಿಮರು ಮಕ್ಕಾದಲ್ಲಿ ನೆರೆದರು. ಎಲ್ಲದಕ್ಕೂ ಪ್ರವಾದಿವರ್ಯರು(ಸ) ನೇತೃತ್ವ ವಹಿಸಿದ್ದರು. ಈ ಐತಿಹಾಸಿಕ ನಿಮಿಷಗಳಲ್ಲಿ ಅವರು ತಮ್ಮ ಆಪ್ತ ಸಂಗಾತಿ ಬಿಲಾಲ್‌ರನ್ನು ತಮ್ಮ ಪಕ್ಕದಲ್ಲೇ ನಿಲ್ಲಿಸಲು ಮರೆಯಲಿಲ್ಲ. ಓರ್ವ ನೀಗ್ರೋ ಗುಲಾಮನಿಗೆ ಭೂಮಿಯಲ್ಲಿ ದೊರೆತ ಅತ್ಯುನ್ನತವಾದ ಗೌರವ. ಇದಕ್ಕಿಂತ ಮೊದಲೋ ಅಥವಾ ನಂತರದ ಕಾಲದಲ್ಲೋ ಇಂತಹ ಉನ್ನತ ಸ್ಥಾನ ಪಡೆಯುವ ಸೌಭಾಗ್ಯ ಯಾವ ಕರಿಯ ಗುಲಾಮನಿಗೂ ಲಭಿಸಿಲ್ಲ. ಆದ್ದರಿಂದ ಪ್ರಮುಖ ಸಹಾಬಿ ಉಮರ್‌ರು(ರ) ಬಿಲಾಲ್‌ರನ್ನು ನಮ್ಮ ನಾಯಕ ಎಂದೇ ಸಂಬೋಧಿಸುತ್ತಿದ್ದರು. ಇಂತಹ ಪ್ರಶಂಸೆಯ ಮಾತುಗಳಿಗೆ ಬಿಲಾಲ್ ಹೀಗೆ ಪ್ರತಿಕ್ರಿಯಿಸುತ್ತಿದ್ದರು. 'ನಾನೋರ್ವ ನೀಗ್ರೋ, ನಿನ್ನೆಯವರೆಗೆ ಕೇವಲ ಓರ್ವ ಗುಲಾಮ.'

# ಕಅಬಾದ ತುದಿಯಲ್ಲಿ

"ಮಕ್ಕಾದವರ ಮೇಲೆ ಶಾಪವಿರಲಿ. ನಮ್ಮ ಪ್ರವಾದಿಯನ್ನು ಅವರು ಶಕುನಿಗನನ್ನಾಗಿಸಿದ್ದಾರೆ. ಶಕುನ ದಂಡ ಹಾಗೂ ಇಬ್ರಾಹೀಮರಿಗೆ ಏನು ಸಂಬಂಧವಿದೆ? ಇಬ್ರಾಹೀಮ್ ಯಹೂದಿಯೋ, ಕ್ರೈಸ್ತನೋ ಆಗಿರಲಿಲ್ಲ, ಅವರು ನಿಷ್ಕಳಂಕ ಮುಸ್ಲಿಮರಾಗಿದ್ದರು. ಅವರು ಬಹುದೇವ ವಿಶ್ವಾಸಿಯಾಗಿರಲಿಲ್ಲ," ಶಕುನದ ದಂಡಗಳು ಮತ್ತು ಮರದಿಂದ ನಿರ್ಮಿಸಿದ ಪಾರಿವಾಳ ಕೈಯಲ್ಲಿ ಹಿಡಿದು ನಿಂತಿರುವ ಹಝ್ರತ್ ಇಬ್ರಾಹೀಮರ(ಅ) ಶಿಲ್ಪ ಕಂಡಾಗ ಪ್ರವಾದಿ(ಸ) ಹೇಳಿದರು.

ಮಕ್ಕಾ ವಿಜಯದ ಸಂದರ್ಭದಲ್ಲಿ ಕಅಬಾ ಭವನದ ಬಾಗಿಲು ತೆರೆದಾಗ ಪ್ರವಾದಿಯವರಿಗೆ ಈ ದೃಶ್ಯ ಗೋಚರಿಸಿತು. ಕಅಬಾದ ಗೋಡೆಗಳಲ್ಲಿ ದೇವಚರರ ಹಾಗೂ ಪೂರ್ವ ಪ್ರವಾದಿಗಳ ಚಿತ್ರಗಳೇ ತುಂಬಿದ್ದವು. ಪ್ರವಾದಿವರ್ಯರು(ಸ) ಅವೆಲ್ಲವನ್ನೂ ಅಲ್ಲಿಂದ ಅಳಿಸಿದರು.

ಮಕ್ಕಾ ತಲುಪಿದ ಪ್ರವಾದಿಯವರು(ಸ) ಏಳು ಬಾರಿ ಕಅಬಾ ಪ್ರದಕ್ಷಿಣೆ ಮಾಡಿದರು. ಬಳಿಕ ಉಸ್ಮಾನ್ ಬಿನ್ ತಲ್ಹಾರೊಂದಿಗೆ ಅದರ ಬೀಗದ ಕೈ ತರಲು ಆಜ್ಞಾಪಿಸಿದರು. ನಂತರ ಕಅಬಾದ ಬಾಗಿಲ ಮೇಲೆ ನಿಂತು ಪ್ರವಾದಿಯವರು(ಸ) ಘೋಷಿಸಿದರು. "ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ, ಅವನು ಏಕನು. ಅವನಿಗೆ ಸಹಭಾಗಿಗಳಿಲ್ಲ, ಅವನು ತನ್ನ ವಾಗ್ದಾನವನ್ನು ಪೂರ್ಣಗೊಳಿಸಿದ್ದಾನೆ. ಆತನ ನಿಷ್ಠಾವಂತ ದಾಸರಿಗೆ ಸಹಾಯ ಮಾಡಿದ್ದಾನೆ. ಶತ್ರುಗಳ ಸರ್ವಶಕ್ತಿಯನ್ನೂ ನಿರ್ನಾಮ ಮಾಡಿದ್ದಾನೆ."

ಉಸ್ಮಾನ್ ಬಿನ್ ತಲ್ಹಾ ಬೀಗದ ಕೈಯೊಂದಿಗೆ ಬಂದಾಗ ಪ್ರವಾದಿವರ್ಯರು(ಸ) ಅದನ್ನು ಪಡೆದುಕೊಂಡು ಇಂದು ಒಳಿತಿನ ವಾಗ್ದಾನ ಪೂರ್ಣಗೊಂಡ ದಿನ ಎಂದು ಹೇಳಿದರು. ಬಿಲಾಲ್‌ರ ಕೈಗೆ ಬೀಗದ ಕೈಯನ್ನು ನೀಡಿ ಕಅಬಾದ ಬಾಗಿಲು ತೆರೆಯಲು ತಿಳಿಸಿದರು. ಬಳಿಕ ಪ್ರವಾದಿಯವರೊಂದಿಗೆ ಬಿಲಾಲ್, ಉಸಾಮಾ ಬಿನ್ ಝೈದ್ ಮತ್ತು ಉಸ್ಮಾನ್ ಬಿನ್ ತಲ್ಹಾ ಪವಿತ್ರ ಭವನಕ್ಕೆ ಪ್ರವೇಶಿಸಿದರು. ಸುಂದರಿಯರ ರೂಪದಲ್ಲಿ ಚಿತ್ರಿಸಿದ

ದೇವಚರರ ಚಿತ್ರ ನೋಡಿ ಪ್ರವಾದಿವರ್ಯರು(ಸ) ಹೇಳಿದರು: 'ದೇವಚರರಿಗೆ ಮನುಷ್ಯ ರೂಪವಿಲ್ಲ, ಅವರು ಸ್ತ್ರೀಯರೋ ಅಥವಾ ಪುರುಷರೋ ಅಲ್ಲ?' ಬಳಿಕ ಪ್ರವಾದಿಯವರ(ಸ) ಆದೇಶದಂತೆ ಕಅಬಾವನ್ನು ವಿಗ್ರಹಗಳಿಂದ ಮುಕ್ತಗೊಳಿಸಲಾಯಿತು. ಅದನ್ನು ನೋಡಿ ಪ್ರವಾದಿವರ್ಯರು ಘೋಷಿಸಿದರು. 'ಹೇಳಿರಿ, ಸತ್ಯವು ಬಂದಿದೆ. ಮಿಥ್ಯವು ಅಳಿದಿದೆ. ಅಸತ್ಯವು ತೊಲಗಿಯೇ ತೀರುವುದು'

ಹೀಗೆ ಪವಿತ್ರ ಕಅಬಾ ಭವನದಿಂದ ವಿಗ್ರಹಗಳು ಹೊರಬಿದ್ದವು ದೇವಭವನವು ಶುದ್ಧಿಯಾಯಿತು. ಅಧಿಕಾರ ವರ್ಗದ ಮೋಸದ ಜಾಲಕ್ಕೆ, ಶ್ರೀಮಂತರಿಗೆ ತಮ್ಮ ಅಹಂಕಾರ ಪ್ರದರ್ಶನಕ್ಕೆ ಸಹಾಯಕವಾದ ದೇವರುಗಳು, ಜನಸಾಮಾನ್ಯರನ್ನು ಮೂಢನಂಬಿಕೆಯಲ್ಲಿ ಮುಳುಗಲು, ಅವರನ್ನು ಪ್ರಭುಗಳ ಗುಲಾಮರನ್ನಾಗಿ ಮಾರ್ಪಡಿಸಲು, ಪುರೋಹಿತಶಾಹಿ ವರ್ಗದ ಮೂಲಕ ಜನರನ್ನು ದಾರಿತಪ್ಪಿಸಲು ಶೈತಾನನು ಉಪಯೋಗಿಸುತ್ತಿದ್ದ 360 ವಿಗ್ರಹಗಳು ನಿರ್ನಾಮವಾದವು. ಹೀಗೆ ಇಪ್ಪತ್ತು ವರ್ಷಗಳಿಂದ ಪ್ರವಾದಿಗಳು ನೀಡುತ್ತಿದ್ದ ಸಂದೇಶವು ಸಂಪೂರ್ಣವಾಗಿ ಜಾರಿಗೆ ಬಂತು. ಮಕ್ಕಾ ನಗರವು ಯಾವ ಕಾರಣದಿಂದ ಪ್ರವಾದಿ ಹಾಗೂ ಅನುಯಾಯಿಗಳನ್ನು ಮರ್ದಿಸಿತೋ ಅದು ವಿಜಯ ಹೊಂದಿತು. ಕುರೈಶರ ಕಣ್ಣ ಮುಂದೆಯೇ ಒಂದೊಂದಾಗಿ ವಿಗ್ರಹಗಳನ್ನು ಅಳಿಸಿ ಹಾಕಿದಾಗ ಪವಿತ್ರ ಭವನದಲ್ಲಿ ಬಹುದೇವ ವಿಶ್ವಾಸದ ಅಧಿಕಾರ ಕೊನೆಗೊಂಡಿತು. ತಾವು ಹಾಗೂ ತಮ್ಮ ಪೂರ್ವಿಕರು ಆರಾಧಿಸುತ್ತಿದ್ದ ಪ್ರತಿಮೆಗಳು ನಿಸ್ಸಹಾಯಕರಾಗಿ ಅಳಿದು ಹೋಗುವುದನ್ನು ಅವರು ನೋಡಿ ನಿಂತರು.

ಕಅಬಾ ಭವನದ ಶುದ್ಧೀಕರಣ ಪೂರ್ಣಗೊಂಡೊಡನೆ ಪ್ರವಾದಿವರ್ಯರು(ಸ) ಬಿಲಾಲ್‌ರನ್ನು ಬಳಿಗೆ ಕರೆದರು. ಪವಿತ್ರ ಭವನದ ಮೇಲೆ ಹತ್ತಿ ಅದಾನ್ ಕೊಡುವಂತೆ ಸೂಚಿಸಿದರು. ಬಿಲಾಲ್ ಅದನ್ನು ನಿರೀಕ್ಷಿಸಿರಲಿಲ್ಲ, ಐತಿಹಾಸಿಕ ಮಕ್ಕಾ ವಿಜಯದ ಈ ಸಂದರ್ಭದಲ್ಲಿ ಒಂದು ಲಕ್ಷದಷ್ಟು ಜನಸಾಗರವನ್ನು ಸಾಕ್ಷಿಯಾಗಿಸಿ, ಕಅಬಾದ ನೆತ್ತಿಯ ಮೇಲೇರಿ ವಿಜಯದ ಘೋಷಣೆಯನ್ನು ಮಾಡುವ ಅವಕಾಶ ಅವರಿಗೆ ಅನಿರೀಕ್ಷಿತವಾಗಿತ್ತು. ನಿಜವಾಗಿ ಶೂರ ಪರಾಕ್ರಮಿಗಳು, ಸೇನಾ ದಂಡನಾಯಕರು ಹಾಗೂ ಸಮಾಜ ಮುಖಂಡರು ಹೀಗೆ ವಿಜಯವನ್ನು ಘೋಷಿಸುವುದಿದೆ. ಆದರೆ ಕೇವಲ ಏಕದೇವನ ಆರಾಧನೆಗಾಗಿ ವಿಶ್ವದಲ್ಲಿ ಪ್ರಪ್ರಥಮವಾಗಿ ನಿರ್ಮಿಸಲ್ಪಟ್ಟ ಭವನದ ಮೇಲೆ ಅಲ್ಲಾಹನ ಮಹಾನತೆಯನ್ನು ಘೋಷಿಸಲು ಬಿಲಾಲ್‌ರೇ ಸೂಕ್ತ ವ್ಯಕ್ತಿ ಎಂದು ಪ್ರವಾದಿವರ್ಯರು(ಸ) ತೀರ್ಮಾನಿಸಿದ್ದರು. ಏಕೆಂದರೆ ಆತನ ಏಕತ್ವವನ್ನು ಬಹಿರಂಗವಾಗಿ ಒಪ್ಪಿಕೊಂಡ ಕಾರಣಕ್ಕೆ ಅತಿ ಹೆಚ್ಚು ಕ್ರೂರಮರ್ದನಗಳಿಗೆ ಒಳಗಾದ ಬಿಲಾಲ್‌ರಿಗಿಂತ ಅರ್ಹತೆ ಬೇರೆ ಯಾರಿಗೂ ಇಲ್ಲವೆಂಬುದು ಪ್ರವಾದಿವರ್ಯರ(ಸ) ಭಾವನೆಯಾಗಿತ್ತು. ಇತಿಹಾಸವು ಎಲ್ಲಾ ಕಾಲಗಳಲ್ಲೂ ದಮನಿಸಲು

ಯತ್ನಿಸಿದ ಕರಿಯ ಗುಲಾಮ ವರ್ಗದವರು ತಮ್ಮ ಸ್ವಾತಂತ್ರ್ಯವನ್ನು ಘೋಷಿಸುವುದು ಸರಿಯಾದ ಕ್ರಮವಲ್ಲವೇ? ಹಿಂಸೆ, ಮರ್ದನ, ದೌರ್ಜನ್ಯಗಳೇ ಜೀವನವಾಗಿದ್ದ ಕರಿಯ ಗುಲಾಮನೇ ಈ ಮಹೋನ್ನತ ವಿಜಯದ ಮಹತ್ವ ಹಾಗೂ ಸಮಾನತೆಯನ್ನು ಪ್ರತಿಪಾದಿಸುವ ಈ ಘೋಷಣೆಯನ್ನು ಮಾಡಲಿ ಎಂಬುದು ಅವರ ಉದ್ದೇಶವಾಗಿತ್ತು. ಶತಮಾನಗಳ ಬಳಿಕವೂ ಜನಕೋಟಿಗಳ ಮನದಲ್ಲಿ ಕಅಬಾದ ಮೇಲೆ ಹತ್ತುತ್ತಿರುವ, ಇದ್ದಲಿನಂತೆ ಕಪ್ಪಗಿರುವ ಬಿಲಾಲ್‌ರ ಚಿತ್ರವು ಮಸುಕಾಗದೆ ಅಚ್ಚಳಿಯದೆ ಉಳಿದಿದೆ. ಕಅಬಾವು ಬಿಲಾಲ್‌ರಂತೆ ಕಪ್ಪಾದ ಕಲ್ಲುಗಳನ್ನು ಸರಳವಾಗಿ ಜೋಡಿಸಿ ನಿರ್ಮಿಸಿದ ಒಳಭಾಗ ಟೊಳ್ಳಾಗಿರುವ ಒಂದು ಆಯತಾಕಾರದ ರಚನೆಯಾಗಿದೆ. ಆದರೆ ಎಲ್ಲರೂ ಅದನ್ನು ನೋಡುವಾಗ ಅವಾಕ್ಕಾಗುತ್ತಾರೆ. ಅದರಲ್ಲಿ ಶಿಲ್ಪ ಸೌಂದರ್ಯವಿಲ್ಲ, ಕಲಾ ನೈಪುಣ್ಯವಿಲ್ಲ, ಕೆತ್ತನೆಯ ಕೆಲಸವಿಲ್ಲ. ಅಲ್ಲದೆ ಅದು ಚಕ್ರವರ್ತಿಗಳ ಅಥವಾ ರಾಜಂದಿರ ಸ್ಮಾರಕವಲ್ಲ, ಮಹಾಪುರುಷರ, ಪ್ರವಾದಿಗಳ ಸಮಾಧಿಗಳಲ್ಲ. ಅಂತಹ ವಿಶೇಷತೆಯೇನಿಲ್ಲದಿದ್ದರೂ ಅದರಲ್ಲಿ ಆಕರ್ಷಣೆಯಿದೆ. ನೋಡುಗರು ಅದನ್ನು ಕಣ್ತುಂಬಾ ನೋಡುತ್ತಾರೆ. ಎಷ್ಟು ಬಾರಿ ನೋಡಿದರೂ ಅವರಿಗೆ ಸಾಕೆನಿಸುವುದಿಲ್ಲ. ಈ ಪವಿತ್ರ ಭವನವನ್ನು ನೋಡಲು ಹಾತೊರೆಯದ ಮುಸ್ಲಿಮನನ್ನು ಕಾಣಲು ಸಾಧ್ಯವಿಲ್ಲ. ಅದು ವಿಶ್ವಾಸ, ಪ್ರಾರ್ಥನೆ ಹಾಗೂ ಪ್ರೀತಿಯ ಕೇಂದ್ರವಾಗಿದೆ. ಗತ ಶತಮಾನಗಳಲ್ಲಿ ಆಗಿ ಹೋದ ಕೋಟಿಗಟ್ಟಲೆ ವಿಶ್ವಾಸಿಗಳ ಮನಸೂರೆಗೊಂಡ ಪರಿಶುದ್ಧ ಭವನ ಪ್ರಪಂಚದಲ್ಲಿರುವ ಮುಸ್ಲಿಮರ ಮುಖವು ದಿನಕ್ಕೆ ಐದು ಬಾರಿ ಅದರೆಡೆಗೆ ತಿರುಗುತ್ತದೆ. ಇನ್ನು ಬರಲಿರುವ ಎಣಿಸಲಸಾಧ್ಯವಾದ ಜನರ ಮನಸ್ಸು ಹಾಗೂ ಹೃದಯವೂ ಅದರತ್ತಲೇ ಕೇಂದ್ರೀಕೃತವಾಗುತ್ತದೆ. ಐತಿಹಾಸಿಕವಾದ ಆ ಸುಂದರ ಗಳಿಗೆಯಲ್ಲಿ ಆ ಪವಿತ್ರ ಭವನದ ಮೇಲೇರಿ, ಯುಗಾಂತರದ ಕೋಟಿಗಟ್ಟಲೆ ಮಾನವರ ವಿಜಯ ಘೋಷಣೆಯನ್ನು ಮಾಡುವ ಅವಕಾಶ ಕಅಬಾದ ಕರಿಗಲ್ಲಿನಂತೆ ಕಪ್ಪಾದ ಬಿಲಾಲ್ ಬಿನ್ ರಬಾಹ್‌ರಿಗೆ ಲಭಿಸಿತು. ಕ್ರೂರ ದೌರ್ಜನ್ಯದ ಗಾಯದ ಕಲೆಯನ್ನು ದೇಹದಲ್ಲಿ ಪಡೆದ ಬಿಲಾಲ್(ರ), ಮುಖದಲ್ಲಿ ಗುಲಾಮತನದ ಚಿಹ್ನೆಗಳು ಹಾಗೂ ಬೆನ್ನಲ್ಲಿ ಯಜಮಾನನ ಚಾಟಿಯೇಟಿನ ಕಲೆಗಳಿಂದ ಎದ್ದು ನಿಂತ ಬಿಲಾಲ್!

ಪವಿತ್ರ ಕಅಬಾದ ಮೇಲೇರಿ ವಿಜಯ ಘೋಷಿಸಲು ಬಿಲಾಲ್ ಎಲ್ಲರಿಗಿಂತಲೂ ಸೂಕ್ತ ವ್ಯಕ್ತಿಯಾಗಿದ್ದರು. ಅದನ್ನು ಬಿಲಾಲ್‌ರ ವರ್ಗದವರೇ ನಿರ್ಮಿಸಿದ್ದರು. ಹಝ್ರತ್ ಇಬ್ರಾಹೀಮ್‌ರ(ಅ) ಪತ್ನಿ ಸಾರಾರ ದಾಸಿ ಹಾಜಿರಾರ ಛಾಯೆ ಅದರಲ್ಲಿ ಅಚ್ಚಳಿಯದೆ ಉಳಿದಿದೆ. ದರಿದ್ರೆಯೂ ಕರಿಯಳೂ ನೋಡುಗರಲ್ಲಿ ಯಾವುದೇ ಕೌತುಕವನ್ನು ಮೂಡಿಸದ ಹಾಜಿರಾರ ಮನೆಯ ಪಕ್ಕದಲ್ಲೇ ಕಅಬಾ ನಿರ್ಮಾಣವಾಗಿತ್ತು. ಆ ಗುಲಾಮ ಹೆಣ್ಣನ್ನು ಮರೆತು ಕಅಬಾದ ಬಗ್ಗೆ ಯೋಚಿಸಲು ಯಾರಿಗೂ ಸಾಧ್ಯವಿಲ್ಲ. ಅದರ ನಿರ್ಮಾಣದ ಹಿಂದೆ

ಮರುಭೂಮಿಯಲ್ಲಿ ಉಳಿಯಬೇಕಾಗಿ ಬಂದ ಹಾಜಿರಾ ಹಾಗೂ ಮಗುವಿನ ಕಥೆಯಿದೆ. ನಿರ್ಜನವಾದ, ಫಲ, ಜಲ ಶೂನ್ಯವಾದ ಬೆಂಗಾಡಿನಲ್ಲಿ ಒಂಟಿಯಾದ ತಾಯಿ-ಮಗ! ಆ ಗುಲಾಮ ಹೆಣ್ಣು ಇಬ್ರಾಹೀಮರಿಂದ(ಅ) ಗರ್ಭ ಧರಿಸಿ ಪ್ರಸವಿಸಿದ ಮುಗ್ಧ ಕಂದಮ್ಮ ಸುಡುಬಿಸಿಲಿನ ಮರುಭೂಮಿಯಲ್ಲಿ ದಾಹದಿಂದ ಬಳಲಿ ಕಾಲು ಬಡಿದು ಅತ್ತ ಘಟನೆಯನ್ನು ನೆನಪಿಸದೆ ಕಅಬಾದ ಕುರಿತು ಆಲೋಚಿಸಲೂ ಸಾಧ್ಯವಿಲ್ಲ. ಕರಿಯ ಗುಲಾಮ ಹೆಣ್ಣಿನ ಪ್ರಿಯ ಪುತ್ರನ ಹೆಜ್ಜೆ ಗುರುತುಗಳನ್ನು ಪಡೆದ ದಿವ್ಯ ಕಾರುಣ್ಯ ಝುಂ ಝುಂ ಆಗಿ ಹರಿದುದನ್ನು ಯೋಚಿಸದೆ ಆ ಪುಣ್ಯ ಭವನದಿಂದ ಮರಳುವುದು ಸಾಧ್ಯವಿಲ್ಲ. ನಂತರದ ದಿನಗಳಲ್ಲಿ ಪ್ರವಾದಿಯಾದ ಆ ಕಂದನು ಬೆಳೆದು ಯುವಕನಾದಾಗ ತಂದೆಯೊಡನೆ ಸೇರಿ ಈ ಪವಿತ್ರ ಗೇಹವನ್ನು ನಿರ್ಮಿಸಿದ್ದರು. ದೇವನ ಆಜ್ಞೆಯಂತೆ ಆರಾಧನೆಗಾಗಿ ಮಾನವರಿಗಾಗಿ ನಿರ್ಮಿಸಲ್ಪಟ್ಟ ಪ್ರಥಮ ಭವನ. ಪ್ರಪಂಚದ ಅತ್ಯಂತ ಪವಿತ್ರ ಆರಾಧನಾಲಯ. ಪ್ರಪ್ರಥಮ ದೇವಭವನ. ಸಕಲ ಪುಣ್ಯಗಳ ಕೇಂದ್ರೀಯ ಬಿಂದು. ಕರಿಯ ಹೆಣ್ಣು ಹಾಜಿರಾರ ಪ್ರಿಯ ಪುತ್ರನ ಹೆಜ್ಜೆ ಗುರುತು ಹಾಗೂ ಕೈಯ ಅಚ್ಚುಗಳನ್ನು ಪಡೆದ ಆ ಪವಿತ್ರ ಕಅಬಾದ ಮೇಲೇರಿ, ಸತ್ಯದ ವಿಜಯವನ್ನು ಘೋಷಿಸಲು, ಚರ್ಮ ಕಪ್ಪಗಿನ ಗುಲಾಮ ಬಿಲಾಲ್‌ಗಿಂತ ಅರ್ಹರು ಯಾರಿದ್ದಾರೆ? ಮಾನವ ಇತಿಹಾಸದಲ್ಲಿ ನಿಂದಿತರೂ ದುರ್ಬಲ ಹಾಗೂ ಅಟ್ಟಲ್ಪಟ್ಟ ಗುಲಾಮ ಹೆಣ್ಣಿಗೆ ತನ್ನ ಬಳಿ ಉದಾತ್ತವಾದ ಸ್ಥಾನ ನೀಡಿದ ಕರುಣಾನಿಧಿಯಾದ ಅಲ್ಲಾಹನ ವಾಗ್ದಾನ ಪೂರ್ಣಗೊಂಡಿರುವುದನ್ನು ಘೋಷಿಸಲು, ಉಮಯ್ಯನ ಗುಲಾಮಿ ಪಾಳಯದಿಂದ ಸತ್ಯಧರ್ಮ ಸ್ವೀಕರಿಸಿದ ಬಿಲಾಲ್ ಅತ್ಯಂತ ಸೂಕ್ತ ವ್ಯಕ್ತಿಯಾಗಿದ್ದರು.

ಬಿಲಾಲ್ ಘನ ಚೌಕಾಕಾರದ ಕಅಬಾದ ಮೇಲೇರಿ ಸುತ್ತಲೂ ಕಣ್ಣೋಡಿಸಿದರು. ನಾಲ್ಕೂ ಸುತ್ತ ಕಿಕ್ಕಿರಿದು ನಿಂತಿರುವ ಜನಸಾಗರ. ಅದರಲ್ಲಿ ಇರುವ ಜನರನ್ನೆಲ್ಲಾ ಅವಲೋಕಿಸುತ್ತಾರೆ. ಎಂತೆಂತಹ ಮನುಷ್ಯರು! ಪ್ರವಾದಿ ಮತ್ತು ಅನುಯಾಯಿಗಳನ್ನು ಪರಲೋಕಕ್ಕೆ ಕಳುಹಿಸಲು ಕಷ್ಟಪಟ್ಟವರಿದ್ದಾರೆ. ನಮ್ಮನ್ನು ಸ್ವದೇಶದಿಂದ ಅಟ್ಟಿದವರಿದ್ದಾರೆ. ದೇಶ ತ್ಯಜಿಸಿದರೂ ಕೊಲ್ಲಲು ಹಿಂಬಾಲಿಸಿ ಬಂದವರಿದ್ದಾರೆ. ತನಗೆ ಸುತ್ತಿಗೆಯಿಂದ ಹೊಡೆದಾಗ ಕೇಕೆ ಹಾಕಿದವರಿದ್ದಾರೆ. ಸುಡುಬಿಸಿಲಿನಲ್ಲಿ ಎಳೆದಾಡಲ್ಪಡುತ್ತಿರುವಾಗ ಉಮಯ್ಯನನ್ನು ಹುರಿದುಂಬಿಸಿದವರಿದ್ದಾರೆ. ತಾನು ನೋವಿನಿಂದ ಚಡಪಡಿಸುತ್ತಿರುವಾಗ ಪರಿಹಾಸ್ಯ ಮಾಡಿದವರು, ಕಟ್ಟಕಡೆಗೆ ಅಬೂಬಕರ್ ತನ್ನನ್ನು ಖರೀದಿ ಸಬಯಸಿದಾಗ ಅದರಿಂದಲೂ ತಡೆದವರಿದ್ದಾರೆ. ಅಲ್ಲದೆ ನಮ್ಮ ಸಂಗಡಿಗರನ್ನು ಕೊಂದವರು, ಸಂದೇಶವಾಹಕರ ಪವಿತ್ರ ಕೊರಳಲ್ಲಿ ಕೊಳೆತ ಕರುಳನ್ನು ಹಾಕಿದವರು, ದುರ್ಬಲರೂ ನಿರಾಯುಧರೂ ಆಗಿರುವ ಸತ್ಯವಿಶ್ವಾಸಿಗಳನ್ನು ಹಿಂಸಿಸಿದವರು, ಮುಸ್ಲಿಮರನ್ನು ಆ ನಿಮಿಷದ ವರೆಗೂ ಶಾಂತಿ ಸಮಾಧಾನದಿಂದಿರಲು ಅನುಮತಿ ನೀಡದವರು. ಹೀಗೆ ಒಂದೇ ಎರಡೇ.... ಆದರೆ ಎಲ್ಲರ

ತಲೆಯೂ ಇಂದು ವಿನಯದಿಂದ ಬಾಗಿದೆ. ಯಾರ ಮುಖದಲ್ಲೂ ದರ್ಪದ, ಅಹಂಕಾರದ ಛಾಯೆಗಳಿಲ್ಲ! ಹಣದ ಮದವಿಲ್ಲ, ಮುಖಂಡನೆಂಬ ಅಹಂಭಾವವಿಲ್ಲ, ಎಲ್ಲರ ಮುಖದಲ್ಲೂ ಸಂತೋಷ, ಕೃತಜ್ಞತಾಭಾವ, ವಿನಯ ಸಮ್ಮೇಳನಗೊಂಡಿದೆ. ಎಲ್ಲೆಲ್ಲೂ ಪ್ರೀತಿ, ಆನಂದದ ವಾತಾವರಣವಿದೆ? ತಾವು ಓಡಿಸಿದ ಮುಹಮ್ಮದ್(ಸ) ಸ್ವದೇಶಕ್ಕೆ ಮರಳಿದ್ದಾರೆ. ಬಂಧಿತನಾಗಿಯಲ್ಲ, ಲಕ್ಷಾಂತರ ಜನರ ನಾಯಕನಾಗಿ ಆಗಮಿಸಿದ್ದಾರೆ. ಅವರು ಆಡಳಿತಾಧಿಕಾರಿ, ಸಮೂಹದ ನಾಯಕ, ದಂಡನಾಯಕ ಹಾಗೂ ಧಾರ್ಮಿಕ ನೇತಾರ ಹೀಗೆ ಎಲ್ಲವೂ ಆಗಿದ್ದಾರೆ. ಆದರೆ ನಾವು ಬಂದಿಗಳಾಗಿದ್ದೇವೆ. ಆದರೂ ಎಲ್ಲಾ ರೀತಿಯ ದೌರ್ಜನ್ಯವೆಸಗಿದ ನಮಗೆ ಅವರು ಕ್ಷಮೆ ನೀಡಿದ್ದಾರೆ.

ಪ್ರವಾದಿಯವರು(ಸ) ನೆರೆದ ಜನ ಸಮೂಹದೊಡನೆ ಕೇಳಿದರು: 'ನನ್ನಿಂದ ನೀವೇನು ನಿರೀಕ್ಷಿಸುತ್ತೀರಿ?'

ಆಗ ಅವರು ಹೇಳಿದರು: 'ತಾವು ಉದಾರಿಗಳು, ಔದಾರ್ಯದ ಪ್ರತೀಕವಾಗಿದ್ದ ವ್ಯಕ್ತಿಯ ಮಗನೂ ಹೌದು. ಆದ್ದರಿಂದ ನಿಮ್ಮಿಂದ ಒಳಿತನ್ನಲ್ಲದೆ ಬೇರೇನನ್ನೂ ನಿರೀಕ್ಷಿಸುತ್ತಿಲ್ಲ.'

ಆಗ ಪ್ರವಾದಿಯವರು ಲೋಕವು ಅದು ವರೆಗೆ ಕಂಡು ಕೇಳರಿಯದ, ಮುಂದಿನ ಎಲ್ಲಾ ತಲೆಮಾರುಗಳಿಗೂ ಮಾದರಿಯೋಗ್ಯವಾದ ಉದಾತ್ತವಾದ ಕ್ಷಮೆಯನ್ನು ಪರಿಚಯಿಸಿದರು. ಅವರು ಹೇಳಿದರು:

'ನೀವು ಸ್ವತಂತ್ರರಾಗಿದ್ದೀರಿ. ನೀವಿನ್ನು ನಿರ್ಭೀತಿಯಿಂದ ಇಲ್ಲಿಂದ ಮರಳಬಹುದು.'

ಬಿಲಾಲ್‌ರ ಸುತ್ತಲೂ ನಿಶ್ಯಬ್ದತೆ ಆವರಿಸಿತ್ತು. ಸಣ್ಣ ಎಲೆ ಅಲುಗಾಡಿದರೂ ತಿಳಿಯುವಂತಹ ದಿವ್ಯ ಮೌನ. ವಿಜಯದ ಘೋಷಣೆ ಕೇಳಲು, ಸ್ವಾತಂತ್ರ್ಯದ ಶಬ್ದವನ್ನು ಆಲಿಸಲು ಹಾಗೂ ಕರಿಯ ಗುಲಾಮನ ಅದಾನ್‌ನ ಕರೆಯನ್ನು ಆಲಿಸಲು ಜನಸಾಗರ ಶ್ವಾಸ ಬಿಗಿ ಹಿಡಿದು ಕಾದು ನಿಂತಿದೆ.

ಅರಫಾ ಬೆಟ್ಟ ಹಾಗೂ ಸಮೀಪದ ಖುಬೈಸ್ ಬೆಟ್ಟ, ನಡು ಮಧ್ಯಾಹ್ನ ತನ್ನ ಬೆನ್ನನ್ನು ಸುಟ್ಟ ಮರಳ ಕಣಗಳು, ಉಮಯ್ಯನ ಆಡಿನ ಹಿಂಡುಗಳನ್ನು ಮೇಯಿಸುತ್ತಾ ಸಾಗಿದ ಬತ್ಹಾ ಕಣಿವೆ, ತನ್ನಂತೆ ಗುಲಾಮ ಹಾಗೂ ಕರಿಯಳಾಗಿದ್ದ ಹಾಜಿರಾರ ಕಣ್ಣೀರ ಹನಿಗಳು ಹಾಗೂ ಹೆಜ್ಜೆ ಗುರುತುಗಳನ್ನು ಪಡೆದ ಸಫಾ-ಮರ್ವಾ ಬೆಟ್ಟಗಳು ಅವರ ಮಗ ಇಸ್ಮಾಯೀಲ್‌ರ ಪುಟ್ಟ ಪಾದತಳದಿಂದ ಚಿಮ್ಮಿದ ನಿತ್ಯ ಕಾರುಣ್ಯದ ಸಂಕೇತವಾದ ನೀರಿನ ಚಿಲುಮೆಯನ್ನೂ ಸಾಕ್ಷಿಯಾಗಿಸಿ ಮತ್ತು ವಿಜಯ ಮುಹೂರ್ತಕ್ಕೆ ಆಕರ್ಷಣೆ ನೀಡಿದ ಲಕ್ಷಾಂತರ ಜನರನ್ನು, ಸರ್ವಲೋಕಗಳ ಒಡೆಯ, ರಕ್ಷಕನಾದ ಅಲ್ಲಾಹನನ್ನು ಸಾಕ್ಷಿಯಾಗಿಸಿ ಬಿಲಾಲ್‌ರಿಂದ(ರ) ಐತಿಹಾಸಿಕ ಅದಾನ್ ಕರೆ ಮೊಳಗಿತು. ಮನಮೋಹಕ ಮಧುರ ಕಂಠದಲ್ಲಿ ಮಕ್ಕಾದಲ್ಲೆಡೆ ಪ್ರತಿಧ್ವನಿಸಿದ ಆ ಅದಾನ್ ಕರೆ ಐತಿಹಾಸಿಕ ಘಟನೆಯಾಯಿತು. ಅಂತಹ ಅರ್ಥಪೂರ್ಣವಾದ

ಅದಾನ್ ಕರೆಯನ್ನು ಜಗತ್ತು ಈ ಹಿಂದೆಂದೂ ಆಲಿಸಿರಲಿಲ್ಲ. ಅತ್ಯಂತ ನಿರ್ಣಾಯಕ ಕ್ಷಣದ ಕರಿಯ ಗುಲಾಮನ ಕರೆ. ಇದು ಮಾನವ ನಾಗರಿಕತೆಯ ಹೊಸ ಮೈಲಿಗಲ್ಲು ಕೂಡಾ ಹೌದು. ಮಸೀದಿ, ದೇವಾಲಯ, ಚರ್ಚ್‌ಗಳಲ್ಲಿ ಪ್ರಭುಗಳಿಗೆ, ಸವರ್ಣೀಯರಿಗೆ, ಯಜಮಾನರಿಗೆ ಮಾತ್ರ ಗೌರವ ನೀಡುವ ಜಗತ್ತಿಗೆ, ಚರ್ಮ ಕಪ್ಪಗಿನ ಓರ್ವ ನೀಗ್ರೋ ಗುಲಾಮ ಇಂತಹ ಮಹತ್ತರವಾದ ಸ್ಥಾನವನ್ನು ಅಲಂಕರಿಸುವುದನ್ನು ಊಹಿಸಲೂ ಸಾಧ್ಯವಿಲ್ಲ.

ಅವರು ಸುಶ್ರಾವ್ಯವಾಗಿ ಉಚ್ಚಸ್ವರದಲ್ಲಿ ಘೋಷಿಸಿದರು. ಅಲ್ಲಾಹು ಅಕ್ಬರ್! ಅಲ್ಲಾಹನು ಅತ್ಯಂತ ಮಹಾನನು. ಅವನೇ ಅತ್ಯಂತ ದೊಡ್ಡವನು. ಅಲ್ಲಾಹನಲ್ಲದೆ ಬೇರೆ ಆರಾಧ್ಯನಿಲ್ಲ!

ವಾಸ್ತವದಲ್ಲಿ ಬಿಲಾಲ್‌ರ ಈ ಅದಾನ್ ಕರೆ ಸತ್ಯಧರ್ಮವು ಸ್ಥಾಪಿತಗೊಂಡ ವಿಜಯದ ಘೋಷಣೆಯೂ ಆಗಿತ್ತು. ನ್ಯಾಯವು ಸ್ಥಾಪಿತವಾಗಿದೆ. ಸಹೋದರತೆ, ಮಾನವೀಯ ಸದಾಚಾರ ಮೌಲ್ಯಗಳು ಚಿಗುರಿದೆ. ಸಮಾನತೆ ವ್ಯಾಪಿಸಿದೆ. ದೇವ ವಿಶ್ವಾಸದ ಅಲೌಕಿಕ ಹಾಗೂ ಅನಶ್ವರವಾದ ವೃಕ್ಷ ಬೆಳೆದಿದೆ. ಅದರ ಬೇರುಗಳು ಆಳಕ್ಕೆ ಇಳಿದಿದ್ದು, ಕೊಂಬೆಗಳಲ್ಲಿ ಪುಷ್ಪಗಳು ಬಿರಿದು, ಕಾಯಿಗಳು ಪ್ರತ್ಯಕ್ಷವಾಗಿದೆ. ತನ್ನ ಈ ಅವಿಸ್ಮರಣೀಯ ಅದಾನ್ ಕರೆಯೊಂದಿಗೆ ಬಿಲಾಲ್ ಘೋಷಿಸಿದರು. ಅಸತ್ಯವು ಸಂಪೂರ್ಣವಾಗಿ ಅಳಿದಿದೆ. ಅನ್ಯಾಯ ಹಾಗೂ ಅನಾಗರಿಕತೆಯ ಕೋಟೆಗಳು ಕುಸಿದು ಬಿದ್ದಿದೆ. ಮೃಗೀಯತೆಯ ಮೆಟ್ಟಿಲುಗಳು ಮಣ್ಣು ಪಾಲಾಗಿದೆ. ಅಕ್ರಮದ ಅಧಿಕಾರ ದಾಹ ಕೊನೆಗೊಂಡಿದೆ. ಅಸಮಾನತೆಯ ಪ್ರಬಲವಾದ ಕಬ್ಬಿಣದ ಕಂಬಗಳು ಮುರಿದು ಬಿದ್ದಿದೆ. ಬಹುದೇವತ್ವದ ಮುಳ್ಳಿನ ಗಿಡಗಳು ಕರಟಿ ಹೋಗಿದೆ. ಸತ್ಯನಿಷೇಧದ ಭೀಕರ ಕ್ರೌರ್ಯಗಳನ್ನು ತೊಡೆದು ಹಾಕಲಾಗಿದೆ.

ನೆರೆಯ ಅಬ್ಬರದಿಂದ ನೂಹ್‌ರ(ಅ) ಹಡಗಿನಿಂದ ದಡ ಸೇರಿದ ಇಸ್ಲಾಮೀ ಆಂದೋಲನ ಇನ್ನಷ್ಟು ಬೆಳೆದಿದೆ. ನಮ್ರೂದರ ಅಗ್ನಿ ಕುಂಡದಿಂದ ಪಾರಾದ ಇಬ್ರಾಹೀಮರಿಂದ ರಕ್ಷಿಸಲ್ಪಟ್ಟ ಜೀವನ ಸಂಹಿತೆ ಪುನಃ ಪ್ರಬಲವಾಗಿದೆ. ಮೂಸಾರಿಂದ(ಅ) ಕೆಂಪು ಸಮುದ್ರ ದಾಟಿದ ಸತ್ಯಧರ್ಮದಲ್ಲಿ ಹೂಬಿಟ್ಟು ಫಲಗಳಾಗಿದೆ. ಸಹಸ್ರಾರು ವರ್ಷಗಳಿಂದ ಆದರ್ಶ ವ್ಯಕ್ತಿಗಳ ಮೇಲೆ ತಿರುಗಿ ಬಿದ್ದಿದ್ದ ಮರ್ದಕ ಶಕ್ತಿಗಳು ಬಾಲ ಮುದುಡಿಕೊಂಡಿವೆ ಎಂಬುದನ್ನು ಲೋಕಕ್ಕೆ ತನ್ನ ಅದಾನ್ ಕರೆಯ ಮೂಲಕ ಘೋಷಿಸಿದ ಬಿಲಾಲ್ ಬಿನ್ ರಬಾಹ್ ಮಾನವ ಇತಿಹಾಸದಲ್ಲೇ ಮಹೋನ್ನತವಾದ ಪದವಿಯನ್ನು ಅಲಂಕರಿಸಿಕೊಂಡರು.

ಅಂದು ಪ್ರವಾದಿವರ್ಯರ(ಸ) ಭಾಷಣವನ್ನು ಕೇಳಿ ಇವೆಲ್ಲವೂ ತನ್ನ ಹಾಗೂ ತನ್ನ ವರ್ಗಕ್ಕೆಂಬಂತೆ ಬಿಲಾಲ್‌ಗೆ ತೋರಿತು. ಅಲ್ಲಿ ನೆರೆದಿರುವ ಜನಸಾಗರವನ್ನು ಉದ್ದೇಶಿಸಿ ಪ್ರವಾದಿ ಮುಹಮ್ಮದ್(ಸ) ಹೇಳಿದರು: ಅಂಧಕಾರದ ಯುಗದ ಎಲ್ಲಾ ದುರಭಿಮಾನ, ಪ್ರತೀಕಾರಗಳನ್ನು ನಾನು ನನ್ನ ಪಾದದಡಿಯಲ್ಲಿ ಹೊಸಕಿ ಹಾಕಿದ್ದೇನೆ. ಯಾರೂ ಕೂಡಾ ತಮ್ಮ ಗೋತ್ರ ಹಾಗೂ ವಂಶಗಳ ಬಗ್ಗೆ ಅಹಂಕಾರ ಪಡಬಾರದು. ಹಿಂದಿನ ಕಾಲದ ವರ್ಗ,

ವರ್ಣ, ಜಾತಿಯ ಮೇಲ್ಮೆಯನ್ನು ಅಲ್ಲಾಹನು ಕೊನೆಗೊಳಿಸಿದ್ದಾನೆ. ಯಾವನೇ ಅರಬನಿಗೆ ಅರಬೇತರನ ಮೇಲೆ ಶ್ರೇಷ್ಠತೆಯಿಲ್ಲ, ಅರಬೇತರನಿಗೆ ಅರಬನ ಮೇಲೆ ಶ್ರೇಷ್ಠತೆಯಿಲ್ಲ, ಬಿಳಿಯನಿಗೆ ಕರಿಯನಿಗಿಂತ, ಕರಿಯನಿಗೆ ಬಿಳಿಯನಿಗಿಂತ ಯಾವುದೇ ಶ್ರೇಷ್ಠತೆಯಿಲ್ಲ, ನೀವೆಲ್ಲರೂ ಆದಿಪಿತ ಆದಮರ ಮಕ್ಕಳು. ಆದಮನನ್ನು ಮಣ್ಣಿನಿಂದ ಸೃಷ್ಟಿಸಲಾಗಿದೆ. ಅತಿ ಹೆಚ್ಚು ದೇವಭಯವುಳ್ಳವನೇ ನಿಮ್ಮ ಪೈಕಿ ಅತ್ಯುತ್ತಮನು.

ಜನರೇ, ನಿಮ್ಮನ್ನು ಒಂದು ಗಂಡು ಮತ್ತು ಹೆಣ್ಣಿನಿಂದ ಸೃಷ್ಟಿಸಲಾಗಿದೆ. ನಿಮ್ಮನ್ನು ಕುಲ, ಗೋತ್ರಗಳಾಗಿ ವಿಂಗಡಿಸಿರುವುದು ನೀವು ಪರಸ್ಪರ ಪರಿಚಯಪಡುವ ಸಲುವಾಗಿ ಮಾತ್ರ. ನಿಮ್ಮ ಪೈಕಿ ಭಯಭಕ್ತಿಯುಳ್ಳವನೇ ಶ್ರೇಷ್ಠನು.

ಆದರೆ ಅಲ್ಲಿ ಇಸ್ಲಾಮ್‌ನೊಳಗೆ ಸಂಪೂರ್ಣವಾಗಿ ಪ್ರವೇಶಿಸದ ಹಾಗೂ ಸತ್ಯಧರ್ಮದ ಸ್ಫೂರ್ತಿಯನ್ನು ಸಂಪೂರ್ಣ ಒಪ್ಪಲು ತಯಾರಿಲ್ಲದ ಸಣ್ಣ ವರ್ಗವೊಂದಿತ್ತು. ಅವರು ಈ ಎಲ್ಲ ಬೆಳವಣಿಗೆಯನ್ನು ಸಹಿಸಲು ಸಾಧ್ಯವಾಗದೆ ಮೆಲ್ಲನೆ ಗೊಣಗುತ್ತಿದ್ದರು. 'ಕಾಗೆ ಕೂಗುವುದು ಕಅಬಾದ ಮೇಲಿಂದಲ್ಲವೇ?'

ಆದರೆ ಅದನ್ನು ಜೋರಾಗಿ ಹೇಳಲು ಅವರಿಗೆ ಸಾಧ್ಯವಿರಲಿಲ್ಲ, ಏಕೆಂದರೆ ಅವರು ಪೋಷಿಸುತ್ತಿದ್ದ ಪಕ್ಷಪಾತ ಹಾಗೂ ಉಚ್ಚ-ನೀಚತೆಯ ಆಧಿಪತ್ಯ ಕೊನೆಗೊಂಡಾಗಿತ್ತು. ಅಂತಹ ಸಂಕುಚಿತ ಮನೋಭಾವದ ಶವಪೆಟ್ಟಿಗೆಗೆ ಬಿಲಾಲ್ ಕೊನೆಯ ಮೊಳೆಯನ್ನು ಹೊಡೆಯುತ್ತಿದ್ದಾರಲ್ಲವೇ? ವರ್ಗ, ವರ್ಣ ಭೇದಕ್ಕೆ ಯಾವುದೇ ಬೆಲೆ ಕಲ್ಪಿಸದೆ ಇಡೀ ಮಾನವ ಸಮೂಹವು ಆ ಮಹಾ ಸಂಭ್ರಮಕ್ಕೆ ಸಾಕ್ಷಿಯಾಯಿತು.

# ಒಂದು ಯುಗದ ಅಂತ್ಯ

ಜನರು ಪ್ರವಾದಿವರ್ಯರ(ಸ) ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದರು. ಈ ವಿಷಯವನ್ನು ಪ್ರವಾದಿಯವರಿಗೆ ತಿಳಿಸಲು ಬಿಲಾಲ್ ಪ್ರವಾದಿಯವರ(ಸ) ಸೇವಕಿ ಬರೀರರೊಡನೆ ಹೇಳಿದರು:

ನಿಗದಿತ ಸಮಯಕ್ಕಿಂತ ಮೊದಲೇ ಪ್ರಭಾತ ನಮಾಝ್‌ಗಾಗಿ ಮಸೀದಿಗೆ ತಲುಪುತ್ತಿದ್ದ ಪ್ರವಾದಿಯವರು(ಸ) ಅಂದು ಜನರೆಲ್ಲಾ ಸೇರಿದ್ದರೂ ಬಂದಿರಲಿಲ್ಲ. ಇದರಿಂದ ಎಲ್ಲರೂ ದುಃಖಿತರಾದರು. ಮದೀನದ ಸಮೀಪದ ಜುರ್‌ಫಿಲ್ ಎಂಬಲ್ಲಿ ಸೈನ್ಯವನ್ನು ಸಜ್ಜುಗೊಳಿಸುವ ಮೇಲ್ನೋಟ ವಹಿಸುತ್ತಿರುವ ಸಂದರ್ಭದಲ್ಲಿ ರೋಗಪೀಡಿತರಾಗಿ ಮರಳಿದ ವಿಷಯ ಅವರಿಗೆ ತಿಳಿದಿತ್ತು. ಜನರ ನೋವನ್ನು ತಿಳಿದ ಬಿಲಾಲ್ ಸಂದೇಶವಾಹಕರು ಮಸೀದಿಗೆ ಬರಬೇಕೆಂದು ಅತಿಯಾಗಿ ಆಗ್ರಹಿಸಿದರು.

ಬರೀರ ಪ್ರವಾದಿಯವರ(ಸ) ಬಳಿಗೆ ಹೋದರು. ಪ್ರಿಯಪತ್ನಿ ಆಯಿಶಾ ಮತ್ತು ಪ್ರೀತಿಯ ಪುತ್ರಿ ಫಾತಿಮಾ ಬಳಿಯಲ್ಲಿದ್ದರು. ಬರೀರ ಹೇಳಿದರು: 'ಬಿಲಾಲ್ ನಮಾಝ್‌ಗಾಗಿ ಕರೆಯುತ್ತಿದ್ದಾರೆ.'

'ಎಲ್ಲರೂ ನಮಾಝ್ ನಿರ್ವಹಿಸಿದರೆ?' ಪ್ರವಾದಿವರ್ಯರು(ಸ) ಪ್ರಶ್ನಿಸಿದರು.

'ಇಲ್ಲ, ಅವರೆಲ್ಲಾ ತಮ್ಮನ್ನೇ ಕಾಯುತ್ತಿದ್ದಾರೆ.'

ಪ್ರವಾದಿಯವರು(ಸ) ನೀರು ತರಲು ತಿಳಿಸಿದರು. ಹಾಸಿಗೆಯಿಂದ ಏಳಲು ಪ್ರಯತ್ನಿಸಿದರು. ಸಾಧ್ಯವಾಗದೆ ಪ್ರಜ್ಞಾಹೀನರಾದರು. ಗಾಬರಿಗೊಂಡ ಆಯಿಶಾ ಮತ್ತು ಫಾತಿಮಾ ಮುಖಕ್ಕೆ ನೀರು ಚಿಮುಕಿಸಿದರು. ಸ್ವಲ್ಪ ಸಮಯದ ಬಳಿಕ ಎಚ್ಚರಗೊಂಡ ಪ್ರವಾದಿಯವರು(ಸ) 'ಜನರೆಲ್ಲಾ ನಮಾಝ್ ಮಾಡಿದರೆ?' ಎಂದು ಕೇಳಿದರು.

'ತಾವು ಮಲಗಿದಲ್ಲಿಂದ ಏಳಬೇಡಿ. ಬೇರೆಯವರಿಗೆ ನಮಾಝ್‌ನ ನೇತೃತ್ವ ವಹಿಸಲು ಸೂಚಿಸಿರಿ' ಆಯಿಶಾ ಹೇಳಿದರು.

'ಅಬೂಬಕರ್‌ರೊಡನೆ ನಮಾಝ್‌ಗೆ ನೇತೃತ್ವ ವಹಿಸಲು ಹೇಳು' ಪ್ರವಾದಿಯವರು(ಸ) ತಿಳಿಸಿದರು.

ಬರೀರ ವಿಷಯವನ್ನು ಬಿಲಾಲ್‌ರಿಗೆ ತಿಳಿಸಿದ ಬಳಿಕ ಅಬೂಬಕರ್‌ರ ನೇತೃತ್ವದಲ್ಲಿ ನಮಾಝ್ ನಡೆಯಿತು. ಇದುವರೆಗೆ ಇಂತಹ ಅನಾರೋಗ್ಯವು ಪ್ರವಾದಿಯವರಿಗೆ ಬಾಧಿಸಿರಲಿಲ್ಲ. ಇತಿಹಾಸ ಪ್ರಸಿದ್ಧವಾದ ವಿದಾಯ ಭಾಷಣ ನಿರ್ವಹಿಸಿ, ಮದೀನಕ್ಕೆ ಮರಳಿದ ಬಳಿಕ ಸಿರಿಯಾಕ್ಕೆ ಉಸಾಮಾ ಬಿನ್ ಝೈದ್‌ರ ನೇತೃತ್ವದಲ್ಲಿ ಸೈನ್ಯವನ್ನು ಸಿದ್ಧಪಡಿಸಲು ಜುರ್ಷ ಎಂಬಲ್ಲಿಗೆ ತೆರಳಿದ್ದರು. ಅಲ್ಲಿ ಅವರು ರೋಗಪೀಡಿತರಾದರು. ರೋಗವು ಉಲ್ಬಣಿಸಿದಾಗ ಮದೀನಕ್ಕೆ ಮರಳಬೇಕಾಯಿತು. ಅಂದಿನಿಂದ ಪ್ರವಾದಿವರ್ಯರಿಗೆ ನಿದ್ರಾಹೀನತೆ ಉಂಟಾಯಿತು. ಅದು ಹಲವು ದಿನಗಳವರೆಗೆ ಮುಂದುವರಿಯಿತು. ಹೀಗೆ ನಿದ್ದೆಯಿಲ್ಲದ ಒಂದು ರಾತ್ರಿ ಸೇವಕ ಅಬೂ ಮುವೈಹಿಬ್‌ನೊಂದಿಗೆ ಮದೀನಾದ ಸಮೀಪದ ಮುಸ್ಲಿಮ್ ಸ್ಮಶಾನವಾದ ಬಖೀಉಲ್ ಗರ್ಖದ್ ಎಂಬಲ್ಲಿಗೆ ಹೋದರು. ಅಲ್ಲಿ ಅಂತ್ಯ ವಿಶ್ರಾಂತಿ ಪಡೆಯುತ್ತಿರುವವರೊಂದಿಗೆ ಹೇಳಿದರು: 'ಗೋರಿಗಳಲ್ಲಿರುವವರೇ, ನಿಮ್ಮ ಮೇಲೆ ಅಲ್ಲಾಹನ ರಕ್ಷಣೆಯಿರಲಿ. ನಿಮ್ಮ ಇಂದಿನ ಸ್ಥಿತಿ ಇತರರಿಗಿಂತ ಅದೆಷ್ಟೋ ಅನುಗ್ರಹೀತವಾಗಿದೆ.'

ಅಲ್ಲಿಂದ ಮರಳುವಾಗ ಪ್ರವಾದಿವರ್ಯರು(ಸ) ಸೇವಕನೊಡನೆ ಹೇಳಿದರು: 'ಲೌಕಿಕ ಖಜಾನೆಯ ಬೀಗದ ಕೈಗಳು, ಇಲ್ಲಿನ ದೀರ್ಘವಾಸ ಮತ್ತು ಅದರೊಂದಿಗೆ ಸ್ವರ್ಗ ನನ್ನ ಮುಂದೆ ಸಮರ್ಪಿಸಲ್ಪಟ್ಟಿತು ಹಾಗೂ ನನ್ನ ಪ್ರಭುವಿನೊಂದಿಗಿನ ಭೇಟಿ ಇವೆರಡರಲ್ಲಿ ಇಷ್ಟವಿರುವುದನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯವನ್ನು ನನಗೆ ನೀಡಲಾಯಿತು.

'ಅಲ್ಲಾಹನ ಪ್ರವಾದಿಗಳೇ, ಲೌಕಿಕ ಖಜಾನೆಯ ಬೀಗದ ಕೈಗಳೊಂದಿಗೆ ಇಲ್ಲಿನ ಸುದೀರ್ಘ ವಾಸ ಮತ್ತು ಅದರೊಂದಿಗಿನ ಸ್ವರ್ಗವಾಸವನ್ನು ನಿಮಗೆ ಆಯ್ದುಕೊಳ್ಳಬಹುದಲ್ಲಾ?' ಸೇವಕ ಪ್ರಶ್ನಿಸಿದ. 'ಇಲ್ಲ! ಅಲ್ಲಾಹನಾಣೆ. ನಾನು ಅಲ್ಲಾಹನೊಂದಿಗಿನ ಭೇಟಿ ಮತ್ತು ಸ್ವರ್ಗವನ್ನು ಆಯ್ದು ಕೊಂಡಿದ್ದೇನೆ' ಪ್ರವಾದಿವರ್ಯರು(ಸ) ಉತ್ತರಿಸಿದರು.

ಈ ಘಟನೆಯ ಬಳಿಕ ಅವರ ರೋಗವು ಉಲ್ಬಣಿಸುತ್ತಲೇ ಹೋಯಿತು. ಪದೇ ಪದೇ ಕಾಡುತ್ತಿದ್ದ ಜ್ವರದಿಂದ ಪ್ರಜ್ಞಾಹೀನರಾಗುತ್ತಿದ್ದರು. ಇದು ಬಿಲಾಲ್‌ರಂತಹ ವ್ಯಕ್ತಿಗಳಲ್ಲಿ ಉಂಟು ಮಾಡಿದ ಆಘಾತ ಹಾಗೂ ಮಾನಸಿಕ ನೋವು ವರ್ಣಿಸಲಸಾಧ್ಯವಾಗಿತ್ತು. ಪ್ರವಾದಿಯವರನ್ನು ಪ್ರೀತಿಸಿ, ಅವರೊಂದಿಗಿನ 22 ವರ್ಷಗಳ ಕಾಲದ ಮನೋಹರವಾದ ಜೀವನದ ಅನುಭವ ಗಳನ್ನು ಚಿನ್ನದಂತೆ ಜೋಪಾನವಾಗಿರಿಸಿದ ಬಿಲಾಲ್‌ರಿಗೆ ಇದು ಅಸಹನೀಯವಾಗಿತ್ತು.

ಆರೋಗ್ಯ ಸ್ವಲ್ಪ ಸುಧಾರಿಸಿದೊಡನೆ ಪ್ರವಾದಿವರ್ಯರು(ಸ) ಮಸೀದಿಗೆ ಬಂದು ಪ್ರಾರ್ಥಿಸು ತ್ತಿದ್ದರು ಮತ್ತು ಉಪದೇಶಗಳನ್ನು ನೀಡುತ್ತಿದ್ದರು. ಆದರೂ ಹೆಚ್ಚಿನ ಸಮಯಗಳಲ್ಲಿ ಅಬೂಬಕರ್‌ರವರೇ ನಮಾಝ್‌ಗೆ ನೇತೃತ್ವ ವಹಿಸಿದ್ದರು. ಒಮ್ಮೆ ಅಬೂಬಕರ್‌ರ(ರ) ಗೈರು ಹಾಜರಿಯಲ್ಲಿ ಬಿಲಾಲ್‌ರ(ರ) ವಿನಂತಿಯಂತೆ ಉಮರ್‌ರು(ರ) ನೇತೃತ್ವ ವಹಿಸಿದರು. ಸ್ವರ ಕೇಳಿ ವ್ಯಕ್ತಿಯನ್ನು ಗುರುತಿಸಿದ ಪ್ರವಾದಿವರ್ಯರು 'ಅಬೂಬಕರ್ ಎಲ್ಲಿದ್ದಾರೆ? ಅಬೂಬಕರ್‌ರನ್ನು(ರ) ದೂರವಿಡುವುದನ್ನು ಅಲ್ಲಾಹ್ ಹಾಗೂ ಮುಸ್ಲಿಮರು ಇಷ್ಟಪಡುವುದಿಲ್ಲ' ಎಂದು ಹೇಳಿದರು.

ಪ್ರವಾದಿ ಮುಹಮ್ಮದ್(ಸ) ಕ್ರಿ.ಶ. 632 ಜೂನ್ 8ರಂದು ಇಹಲೋಕ ತ್ಯಜಿಸಿದರು. ಅಂದು ಪ್ರಭಾತ ನಮಾಝ್‌ಗೆ ಅವರು ಮಸೀದಿಗೆ ಬಂದಿದ್ದರು. ಆದರೂ ನಮಾಝ್‌ಗೆ ಅಬೂಬಕರ್‌ರ(ರ) ನೇತೃತ್ವವಿತ್ತು. ನಮಾಝಿನ ಬಳಿಕ ಪ್ರವಾದಿವರ್ಯರು ಜನರನ್ನುದ್ದೇಶಿಸಿ ಹೇಳಿದರು.

"ನಾನು ಇದಕ್ಕೆ ಜವಾಬ್ದಾರನಲ್ಲ. ಕುರ್‌ಆನ್ ಅನುಮತಿ ನೀಡದ ಯಾವುದಕ್ಕೂ ಅವಕಾಶ ನೀಡಿಲ್ಲ. ಅದು ನಿಷೇಧಿಸಿದುದನ್ನು ಹೊರತು ಏನನ್ನೂ ನಿಷೇಧಿಸಿಲ್ಲ. ಮಹಾತ್ಮರ ಗೋರಿಗಳನ್ನು ಆರಾಧನಾಲಯಗಳನ್ನಾಗಿಸಿದ ಜನತೆಗೆ ನಾಶವಿದೆ."

ಜನರು ಹಿಂತಿರುಗಿದ ಬಳಿಕ ಆಯಿಶಾರ(ರ) ಮನೆಗೆ ಬಂದ ಪ್ರವಾದಿವರ್ಯರ(ಸ) ಸ್ಥಿತಿ ಚಿಂತಾಜನಕವಾಯಿತು. ಹೆಚ್ಚು ಸಮಯಾವಕಾಶವಿಲ್ಲದೆ ಪ್ರಿಯ ಪತ್ನಿ ಆಯಿಶಾರ(ರ) ಮಡಿಲಲ್ಲಿ ತಲೆಯಿರಿಸಿ ಇಹಲೋಕಕ್ಕೆ ಶಾಶ್ವತವಾಗಿ ವಿದಾಯ ಕೋರಿದರು.

ಮರುದಿನ ಪ್ರಭಾತದಲ್ಲಿ ಬಿಲಾಲ್‌ರು(ರ) ಪ್ರವಾದಿವರ್ಯರು ಪ್ರತಿದಿನವೂ ಮಸೀದಿಗೆ ಆಗಮಿಸುತ್ತಿದ್ದ ಮನೆ ಆ ಬಾಗಿಲಿನೆಡೆಗೆ ದೃಷ್ಟಿ ಹಾಯಿಸಿದರು. ಅವರ ನಿಯಂತ್ರಣದ ಕಟ್ಟೆಯೊಡೆಯಿತು. ಕಪಾಲಗಳಲ್ಲಿ ಕಣ್ಣೀರು ಧಾರಾಕಾರವಾಗಿ ಹರಿಯಿತು. ಗಂಟಲು ಕಟ್ಟಿತು. ವಿರಹವೇದನೆಯಿಂದ ತಲೆ ಭಾರವಾಯಿತು. ಆದರೂ ಗತ್ಯಂತರವಿಲ್ಲದೆ ಅದಾನಿನ ವೇಳೆಯಾಗುವಾಗ ಎದ್ದು ನಿಂತು ಕರೆಯನ್ನು ಆರಂಭಿಸಿದರು.

'ಅಲ್ಲಾಹು ಅಕ್ಬರ್.... ಅಲ್ಲಾಹು ಅಕ್ಬರ್

.......................................

ಅಶ್ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್

ಬಿಲಾಲ್‌ರಿಗೆ(ರ) ಪ್ರಿಯ ಪ್ರವಾದಿಯ ಹೆಸರು ಉಚ್ಚರಿಸಲು ಸಾಧ್ಯವಾಗಲಿಲ್ಲ. ಅತ್ಯಂತ ಕಷ್ಟದಿಂದ ಅಂದು ಹೇಗೋ ಅದಾನ್ ಪೂರ್ತಿಗೊಳಿಸಿದರು. ಅದರ ನಂತರ ಒಮ್ಮೆಯೂ ಪ್ರವಾದಿಯವರ(ಸ) ಮಸೀದಿಯಲ್ಲಿ ಬಿಲಾಲ್‌ರ(ಸ) ಅದಾನ್ ಮೊಳಗಲಿಲ್ಲ. ಅದು ಬಿಲಾಲ್‌ರಿಗೆ(ರ) ಅಸಾಧ್ಯವೇ ಆಗಿತ್ತು. ಪ್ರವಾದಿ ಪ್ರೇಮದ ಅದ್ಭುತ ಪ್ರತೀಕವಾಗಿದ್ದ ಆ ದೇವದಾಸನಿಗೆ ಪ್ರವಾದಿಯವರ(ಸ) ಹೆಸರನ್ನು ಉಚ್ಚಸ್ವರದಲ್ಲಿ ಕೂಗುವ ಸಾಮರ್ಥ್ಯ ಕಳೆದು ಹೋಗಿತ್ತು.

ಒಮ್ಮೆ ಅಬೂಬಕರ್(ರ) ಅದಾನಿನ ಕರೆ ನೀಡಲು ಆದೇಶಿಸಿದಾಗ ಬಿಲಾಲ್(ರ) ಬಹಳ ದುಃಖಿತರಾದರು. ತನ್ನ ದುರಂತಮಯ ಜೀವನಕ್ಕೆ ಅಂತ್ಯ ಕರುಣಿಸಿದ ಕರುಣಾಮಯಿ ಅವರಾಗಿದ್ದರು. ಉಮಯ್ಯನ ಗುಲಾಮಿ ಪಾಳಯದಿಂದ ಅವನ ಕ್ರೂರ ದೌರ್ಜನ್ಯಗಳಿಂದ ರಕ್ಷಿಸಿದ ಮಹಾಪುರುಷರವರು. ಅತ್ಯಂತ ಪರಿಶುದ್ಧ ಹಾಗೂ ಪ್ರವಾದಿವರ್ಯರ(ಸ) ಪ್ರಥಮ ಪ್ರೀತಿಯ ಸಂಗಾತಿಯಾಗಿದ್ದರು. ಆದರೆ ನಾನೇನು ಮಾಡಲಿ? ಅದನ್ನು ನಿರ್ವಹಿಸುವ ಸಾಮರ್ಥ್ಯ ನನ್ನಲ್ಲಿಲ್ಲ. ಆದ್ದರಿಂದ ಅವರು ವಿನೀತರಾಗಿ ಹೇಳಿದರು: 'ನಾನು ತಮಗೆ ಅಧಿಕ

ಋಣಿಯಾಗಿದ್ದೇನೆ. ಆದರೆ ಪ್ರವಾದಿಯವರ(ಸ) ನಿಧನದ ಬಳಿಕ ಅದಾನ್ ನೀಡಲು ನನಗೆ ಸಾಧ್ಯವಾಗುತ್ತಿಲ್ಲ, ಪವಿತ್ರವಾದ ಆ ನಾಮ ಉಚ್ಚರಿಸುವಾಗ ಸ್ವರವು ಗದ್ಗದಿತವಾಗುತ್ತದೆ. ಅದಾನನ್ನು ಪೂರ್ತಿಗೊಳಿಸಲು ಸಾಧ್ಯವಾಗುವುದಿಲ್ಲ, ತಾವು ನನಗೆ ಮಾಡಿರುವ ಉಪಕಾರ ವನ್ನು ಮರೆಯಲು ಎಂದಿಗೂ ಸಾಧ್ಯವಿಲ್ಲ, ಆದರೆ ತಾವು ನನ್ನನ್ನು ತಮಗಾಗಿ ಸ್ವತಂತ್ರಗೊಳಿಸಿದ್ದೀರೆಂದಾದರೆ ಹಾಗೇ ಆಗಲಿ ಅಥವಾ ಅಲ್ಲಾಹನಿಗಾಗಿ ನನ್ನನ್ನು ಬಿಡುಗಡೆಗೊಳಿಸಿದ್ದೀರೆಂದಾದರೆ ತಾವು ನನ್ನನ್ನು ನಿರ್ಬಂಧಿಸಬಾರದು. ಪ್ರವಾದಿವರ್ಯರ(ಸ) ಕಾಲಾನಂತರ ಮತ್ಯಾರಿಗಾಗಿಯೂ ನಾನು ಅದಾನ್ ಕೊಡಲಾರೆ.'

'ಬಿಲಾಲ್, ನನ್ನನ್ನು ಕ್ಷಮಿಸಬೇಕು. ನಿಮ್ಮನ್ನು ನಿರ್ಬಂಧಿಸಲು ನಾನ್ಯಾರು? ನಾನು ನಿಮ್ಮನ್ನು ಅಲ್ಲಾಹನ ಸಂಪ್ರೀತಿಗಾಗಿ ಸ್ವತಂತ್ರಗೊಳಿಸಿದೆ.' ಅಬೂಬಕರ್ ಹೇಳಿದರು.

ಪ್ರವಾದಿ ಮುಹಮ್ಮದ್‌ರ(ಸ) ಯುಗದ ಅಂತ್ಯದೊಂದಿಗೆ ಬಿಲಾಲ್‌ರ ಅದಾನ್ ಕರೆಯೂ ನಿಂತು ಹೋಯಿತು.

# ಕೊನೆಯ ಅದಾನ್

'ಬಿಲಾಲ್! ತಾವು ಎಲ್ಲಿಗೆ ಹೊರಟಿದ್ದೀರಿ...?'

ಯುದ್ಧದ ಸಿದ್ಧತೆಯೊಂದಿಗೆ ತನ್ನ ಮುಂದೆ ನಿಂತ ಬಿಲಾಲ್‌ರೊಡನೆ ಅಬೂಬಕರ್(ರ) ಕೇಳಿದರು.

'ಉಸಾಮರ ಸೈನ್ಯದೊಂದಿಗೆ ಹೊರಡಲು ತಾವು ಅನುಮತಿ ನೀಡಬೇಕು.'

ಅಬೂಬಕರ್‌ರ ಅಧಿಕಾರಾರೋಹಣದ ಕಾರ್ಯ ಪೂರ್ತಿಯಾದೊಡನೆ, ಅವರು ಪ್ರವಾದಿವರ್ಯರ(ಸ) ಅನಾರೋಗ್ಯದಿಂದ ಅಪೂರ್ಣವಾದ ಸೈನ್ಯದ ಸಿದ್ಧತೆಯನ್ನು ಪೂರ್ಣಗೊಳಿಸ ಬಯಸಿದ್ದರು. ಪ್ರವಾದಿಯವರು(ಸ) ನಾಯಕತ್ವಕ್ಕೆ ಸೂಚಿಸಿದ್ದ ಉಸಾಮ ಬಿನ್ ಝೈದ್‌ರನ್ನೇ ಸೇನೆಯ ನಾಯಕನನ್ನಾಗಿ ಮಾಡಲಾಯಿತು. ಪ್ರವಾದಿಯವರ(ಸ) ಅನುಪಸ್ಥಿತಿಯಲ್ಲಿ ಯುದ್ಧ ನಿಲ್ಲಿಸಲು ಕೆಲವರು ಹೇಳಿದರೂ ಅಬೂಬಕರ್ ಒಪ್ಪಲಿಲ್ಲ. ಅವರು ಹೇಳಿದರು: 'ಬೇಟೆ ನಾಯಿಗಳು ನನ್ನನ್ನು ಕಚ್ಚಿ ಎಳೆದರೂ ಅವರು ನಿಶ್ಚಯಿಸಿರುವ ಕಾರ್ಯವನ್ನು ನಾನು ನಿಲ್ಲಿಸಲಾರೆ.'

'ಖಂಡಿತವಾಗಿಯೂ ತಾವು ಹೋಗಬಾರದು' ಒಂದನೆಯ ಖಲೀಫಾ ಹೇಳಿದರು.

'ಪ್ರವಾದಿಯವರ(ಸ) ಅಗಲುವಿಕೆಯಿಂದ ನನಗಾದ ದುಃಖ ಹಾಗೂ ನೋವು ಆಳವಾಗಿದೆ. ಜಿಹಾದ್‌ಗೆ ಹೋಗುವುದರಿಂದ ಸ್ವಲ್ಪವಾದರೂ ಮನಶ್ಶಾಂತಿ ದೊರೆಯಬಹುದು' ಬಿಲಾಲ್ ಹೇಳಿದರು.

'ಆದರೆ ನನಗೆ ನಿಮ್ಮ ಅವಶ್ಯಕತೆಯಿದೆ' ಅಬೂಬಕರ್(ರ) ತನ್ನ ಮನದಿಗಿಂತವನ್ನು ವ್ಯಕ್ತಪಡಿಸಿದರು.

'ಸತ್ಯವಿಶ್ವಾಸಿಯ ಸತ್ಕರ್ಮಗಳಲ್ಲಿ ದೇವ ಮಾರ್ಗದ ಸಮರವು ಶ್ರೇಷ್ಠವೆಂದು ಹೇಳಿದ್ದನ್ನು ನಾನು ಕೇಳಿದ್ದೇನೆ. ಆದ್ದರಿಂದ ತಾವು ದಯಮಾಡಿ ಅನುಮತಿ ನೀಡಬೇಕು.'

'ನಾನು ವೃದ್ಧ ಹಾಗೂ ದುರ್ಬಲನಾಗಿದ್ದೇನೆಂಬುದು ನಿಮಗೆ ತಿಳಿದಿದೆ. ನನ್ನ ಅಂತ್ಯವೂ ಸಮೀಪಿಸಿದೆ. ಅಲ್ಲಾಹ್ ಮತ್ತು ಆತನ ಪ್ರವಾದಿಯೊಡನೆ ಆತ್ಮೀಯ ಸಂಬಂಧ ಹೊಂದಿರುವ ತಾವು ತನ್ನನ್ನು ಬಿಟ್ಟು ಹೋಗಬಾರದು. ತಮ್ಮ ಅನುಪಸ್ಥಿತಿ ನನಗೆ ಅಸಹನೀಯವಾಗಿದೆ.'

ಅಬೂಬಕರ್‌ರ ಮಾತುಗಳನ್ನು ತಿರಸ್ಕರಿಸಲು ಬಿಲಾಲ್‌ರಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ಮುಸ್ಲಿಮ್ ಸೇನೆಯನ್ನು ಬೀಳ್ಕೊಟ್ಟು ಖಲೀಫಾ ಅಬೂಬಕರ್ ಮತ್ತು ಉಮರ್‌ರೊಂದಿಗೆ ಮದೀನಕ್ಕೆ ಮರಳಿದರು. ಅವರು ಪ್ರವಾದಿಯವರಿಲ್ಲದ ಪ್ರವಾದಿಯ ಪಟ್ಟಣದಲ್ಲಿ ವಾಸಿಸುವುದರ ಬಗ್ಗೆ ಅತೀವ ಮಾನಸಿಕ ನೋವನ್ನು ಅನುಭವಿಸಿದರು. ವಿರಹವೇದನೆಯು ಸಹಿಸಲಸಾಧ್ಯವಾಗಿತ್ತು. ಆದರೂ ಖಲೀಫರ ವಿನಂತಿಯನ್ನು ನಿರಾಕರಿಸಲು ಅವರು ಅಶಕ್ತರಾಗಿದ್ದರು.

ಬಳಿಕ ಉಮರ್ ಫಾರೂಕ್‌ರ(ರ) ಕಾಲದಲ್ಲಿ ಬಿಲಾಲ್‌ರು ಪುನಃ ಯುದ್ಧಕ್ಕೆ ಹೋಗಲು ಅನುಮತಿ ಕೇಳಿದರು. ಅಂದು ಮುಸ್ಲಿಮರು ಇರಾಕ್‌ನಲ್ಲಿ ಪರ್ಷಿಯನ್ನರೊಂದಿಗೆ ಮತ್ತು ಸಿರಿಯಾದಲ್ಲಿ ರೋಮನ್ನರೊಂದಿಗೆ ತೀವ್ರ ಹೋರಾಟ ನಡೆಸುತ್ತಿದ್ದರು. ರಣಾಂಗಣದಲ್ಲಿ ಅದು ಇಸ್ಲಾಮೀ ರಾಷ್ಟ್ರದ ನವೋತ್ಥಾನಕ್ಕಾಗಿ ಹೆರಿಗೆ ನೋವನುಭವಿಸುತ್ತಿತ್ತು. ಇಂತಹ ನಿರ್ಣಾಯಕ ಘಟ್ಟದಲ್ಲಿ ತಾನು ಯುದ್ಧದಿಂದ ದೂರವುಳಿಯುವುದು ಸರಿಯಲ್ಲವೆಂದು ಬಿಲಾಲ್‌ರಿಗೆ(ರ) ಅನಿಸಿತು. ದೇವಮಾರ್ಗದಲ್ಲಿ ಸರ್ವಸ್ವವನ್ನೂ ಅರ್ಪಿಸುವ ಅದಮ್ಯ ಬಯಕೆಯು ಯುದ್ಧರಂಗದತ್ತ ಅವರನ್ನು ಸೆಳೆಯುತ್ತಿತ್ತು. ಆದರೆ ಅಮೀರುಲ್ ಮುಅ್‌ಮಿನೀನ್‌ರ ಅನುಮತಿ ಪಡೆಯುವ ಕಾರ್ಯ ಬಾಕಿ ಉಳಿದಿತ್ತು.

"ಪ್ರವಾದಿ ಹಾಗೂ ಅಬೂಬಕರ್‌ರೊಂದಿಗೆ ಕಳೆದ ತಾವು ನನ್ನೊಂದಿಗೆ ಇರುವುದಿಲ್ಲವೇ?" ಉಮರ್(ರ) ಪ್ರಶ್ನಿಸಿದರು.

"ಜಿಹಾದ್‌ನಿಂದ ದೂರವುಳಿಯಲು ಇನ್ನು ನನ್ನಿಂದ ಸಾಧ್ಯವಿಲ್ಲ. ನನ್ನ ಸಹನೆ ಮೀರಿದೆ."

"ಬಿಲಾಲ್ ತಾವು ಹೋಗಬಾರದು. ನನಗೆ ತಮ್ಮ ಅವಶ್ಯಕತೆಯಿದೆ." ಉಮರ್ ಫಾರೂಕ್ ಹೇಳಿದರು.

"ಅಲ್ಲಾಹನನ್ನು ನೆನೆಸಿಯಾದರೂ ನನ್ನನ್ನು ಬಿಡಿ, ದೇವಸಂಪ್ರೀತಿ ಹಾಗೂ ಅದರ ಪ್ರತಿಫಲದಿಂದ ನನ್ನನ್ನು ವಂಚಿಸಬೇಡಿ."

"ಹಾಗಾದರೆ ತಮ್ಮಿಚ್ಛೆಯಂತೆ ಆಗಲಿ! ತಾವೆಲ್ಲಿಗೆ ಹೋಗಬಯಸಿದ್ದೀರಿ?"

"ಸಿರಿಯಾದಲ್ಲಿ ಅಬೂ ಉಬೈದಾರ ಬಳಿಗೆ ಹೋಗುತ್ತೇನೆ?" ಬಿಲಾಲ್(ರ) ಹೇಳಿದರು.

"ಅಲ್ಲಾಹನು ನಿಮ್ಮನ್ನು ಅನುಗ್ರಹಿಸಲಿ." ಉಮರ್(ರ) ಶುಭ ಹಾರೈಸಿದರು.

ಬಿಲಾಲ್(ರ) ಪತ್ನಿಯೊಂದಿಗೆ ಸಿರಿಯಾಕ್ಕೆ ಪ್ರಯಾಣಿಸಿದರು. ಕೆಲವೇ ದಿನಗಳಲ್ಲಿ ಅಬೂ ಉಬೈದಾರ ನೇತೃತ್ವದ ಇಸ್ಲಾಮೀ ಸೇನೆಯೊಂದಿಗೆ ಸೇರಿಕೊಂಡರು.

ಬಳಿಕ ಸಿರಿಯಾದ 'ಗೋಲಾನ್' ಪ್ರದೇಶವನ್ನು ತಮ್ಮ ಸ್ಥಿರ ವಾಸ್ತವ್ಯವಾಗಿ ಆರಿಸಿಕೊಂಡರು. ಅಮೀರುಲ್ ಮುಅ್‌ಮಿನೀನ್ ಉಮರುಲ್ ಫಾರೂಕ್‌ರ(ರ) ಆಗಮನದ ವಾರ್ತೆ ತಿಳಿದು ಜಾಂಬಿಯಾಕ್ಕೆ ತಲುಪಿದರು. ಸೇನಾ ದಂಡನಾಯಕರಾಗಿದ್ದ ಯಝೀದ್ ಬಿನ್ ಅಬೂ ಸುಫ್‌ಯಾನ್ ಮತ್ತು ಖಾಲಿದ್ ಬಿನ್ ವಲೀದ್(ರ) ಮೊದಲೇ ಅಲ್ಲಿಗೆ ತಲುಪಿದ್ದರು. ಅಲ್ಲಿ ಫೆಲೆಸ್ತೀನ್ ನಿವಾಸಿಗಳೊಂದಿಗೆ ಒಪ್ಪಂದ ಮಾಡಿಕೊಂಡ ಖಲೀಫ ಬೈತುಲ್ ಮಕ್ದಿಸನ್ನು ಸಂದರ್ಶಿಸಲು ಬಯಸಿದರು. ಸೇನಾ ನಾಯಕರೊಂದಿಗೆ ಫೆಲೆಸ್ತೀನ್‌ನ ಪಾವನ ಭೂಮಿಗೆ ತಲುಪಿದ ಖಲೀಫ ಉಮರ್(ರ) ನಮಾಝ್‌ನ ಸಮಯವಾದಾಗ ಬಿಲಾಲ್‌ರನ್ನು(ರ) ಬಳಿಗೆ ಕರೆದರು. ಅಲ್ಲಿರುವ ಮುಸ್ಲಿಮರೆಲ್ಲರ ಅಭಿಲಾಷೆಯಂತೆ ಖಲೀಫಾರು ಬಿಲಾಲ್‌ರೊಡನೆ(ರ) ಅದಾನ್ ಕೊಡುವಂತೆ ಬಿನ್ನವಿಸಿದರು. ಪ್ರವಾದಿಯವರ(ಸ) ವಿಯೋಗದ ಬಳಿಕ ಅಂದಿನ ವರೆಗೆ ಅದಾನ್ ಕೊಡಲು ಸಿದ್ಧರಾಗದಿದ್ದ ಬಿಲಾಲ್‌ರಿಗೆ(ರ) ಖಲೀಫ ಹಾಗೂ ಸಂಗಡಿಗರ ಹೃದಯಸ್ಪರ್ಶಿಯಾದ ವಿನಂತಿಯನ್ನು ನಿರಾಕರಿಸಲು ಸಾಧ್ಯವಾಗಲಿಲ್ಲ. ಪವಿತ್ರ ಕಅಬಾ ಹಾಗೂ ಮದೀನಾದ ಮಸ್ಜಿದುನ್ನಬವಿಯ ಮಿನಾರಗಳಿಂದ ಮೊಳಗಿದ ಅದೇ ಶಬ್ದ ಮಸ್ಜಿದುಲ್ ಅಕ್ಸಾದಲ್ಲೂ ಮೊಳಗುವುದನ್ನು ಆಲಿಸಲು ಅತಿಯಾಗಿ ಮೋಹಿಸಿದ ಕಿವಿಗಳನ್ನು ಕಡೆಗಣಿಸಲು ಅವರಿಗೆ ಸಾಧ್ಯವಾಗಲಿಲ್ಲ. ಆರು ವರ್ಷಗಳ ದೀರ್ಘ ಕಾಲದ ಬಳಿಕ ಪುನಃ ಆ ಸುಮಧುರ ಸ್ವರ ಕೇಳಿ ಬಂದಾಗ ಸಹಾಬಿಗಳಲ್ಲಿ ಗತ ಕಾಲದ ಸ್ಮರಣೆಗಳು ಮೂಡಿ ಬಂದುವು. ಪ್ರವಾದಿಯವರನ್ನು(ಸ) ನೆನೆದು ಅವರ ಮನ ಬಿಕ್ಕಳಿಸಿತು. ಕಣ್ಣುಗಳು ತುಂಬಿದವು. ದುಃಖ ಭರಿತವಾದ ಆ ಸನ್ನಿವೇಶ ತುಂಬಾ ಸಮಯ ಉಳಿಯಿತು. ಅಶ್ರುಧಾರೆಗಳುದುರದ ಯಾರೂ ಅಲ್ಲಿರಲಿಲ್ಲ. ಪ್ರವಾದಿಯೊಂದಿಗಿನ(ಸ) ಒಡನಾಟದ ಸಿಹಿ ನೆನಪುಗಳಿಂದ ಮಾತ್ರ ಅದಾನ್ ಪೂರ್ತಿಗೊಳಿಸಲು ಬಿಲಾಲ್‌ರಿಗೆ(ರ) ಸಾಧ್ಯವಾಯಿತು. ಅವರ ಬದುಕಿನ ಕೊನೆಯ ಅದಾನ್ ಕೂಡ ಅದುವೇ ಆಗಿತ್ತು.

ಫೆಲೆಸ್ತೀನ್‌ನ ಸಸ್ಯಶ್ಯಾಮಲವಾದ ಪ್ರದೇಶದಲ್ಲಿ ಬಿಲಾಲ್‌ರ(ರ) ಮನೋಹರವಾದ ಶಬ್ದವು ಅಲೆ ಅಲೆಯಾಗಿ ಸೇರಿಕೊಂಡಾಗ, ಮೂರು ಪುಣ್ಯ ಕೇಂದ್ರಗಳಲ್ಲಿ ಅಲ್ಲಾಹನ ಮಹಾನತೆಯನ್ನು ಉಚ್ಚ ಸ್ವರದಲ್ಲಿ ಘೋಷಿಸಿದ ಪ್ರಥಮ ವ್ಯಕ್ತಿ ಎಂಬ ಅಪೂರ್ವ ಗೌರವಕ್ಕೆ ಪಾತ್ರರಾದರು. ಖಲೀಫ ಉಮರುಲ್ ಫಾರೂಕ್(ರ) ಬೈತುಲ್ ಮಕ್ದಿಸ್‌ನ ಬಾಗಿಲು ತೆರೆದು ಒಳ ಪ್ರವೇಶಿಸಿದರು. ಇತರರೂ ಅವರನ್ನು ಹಿಂಬಾಲಿಸಿದರು. ಅವರೊಂದಿಗೆ ಬಿಲಾಲ್‌ರೂ(ರ)

ಇದ್ದರು. ಅಲ್ಲಾಹನಿಗೆ ಕೃತಜ್ಞತೆ ಮತ್ತು ಪ್ರವಾದಿವರ್ಯರ(ರ) ನೆನಪಲ್ಲಿ ಎಲ್ಲರ ಕಣ್ಣುಗಳೂ ತುಂಬಿದವು. ಮಸೀದಿಯೊಳಗೆ ಪ್ರವೇಶಿಸಿದ ಬಿಲಾಲ್(ರ) ಹೇಳಿದರು; 'ಅಲ್ಲಾಹನ ಸಂದೇಶವಾಹಕರೇ, ತಾವು ಹೇಳಿದ ಮಾತುಗಳು ಸತ್ಯವಾಗಿದೆ! ರೋಮ್-ಪರ್ಷಿಯನ್ ಸೇನೆಯನ್ನು ಸೋಲಿಸಿ ವಿಜಯದ ನಗೆ ಬೀರಿದ ತಮ್ಮ ಸೇನೆಯನ್ನು ನೋಡಲು ತಮ್ಮನ್ನು ಅಪಹಾಸ್ಯ ಮಾಡಿದವರು ಎಲ್ಲಿದ್ದಾರೆ? ತಮ್ಮನ್ನು ಸುಳ್ಳಾಗಿಸಿದವರು ಎಲ್ಲಾ ವಿಧದ ಅವಮಾನ ಮತ್ತು ನಿಂದನೆಯನ್ನು ಅನುಭವಿಸಲು ಈಗೆಲ್ಲಿದ್ದಾರೆ? ತಮ್ಮ ಈ ಮಹತ್ತರವಾದ ವಿಜಯವನ್ನು ಕಾಣಲು ಅಬೂಜಹಲ್, ಉಮಯ್ಯ ಹಾಗೂ ಶೈಬ ಎಲ್ಲಿದ್ದಾರೆ? ಅಲ್ಲಾಹನ ದೂತರೇ, ತಾವೆಲ್ಲಿದ್ದೀರಿ? ಮಕ್ಕಾ ವಿಜಯದ ದಿನದಂತೆ, ನಾನೀಗಲೂ ತಮ್ಮ ಸಾಮಿಪ್ಯವನ್ನು ಅನುಭವಿಸುತ್ತಿದ್ದೇನೆ' ಎಂದು ಗದ್ಗದಿತರಾಗಿ ಹೇಳಿದ ಕೂಡಲೇ ಅವರಂತೆಯೇ ಇತರರೆಲ್ಲರೂ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು.

ಬಿಲಾಲ್(ರ) ಸಿರಿಯಾದಲ್ಲಿ ವಾಸಿಸುತ್ತಿದ್ದರೂ ಅವರ ಮನಸ್ಸು ಮದೀನಾದ ಸುತ್ತಲೇ ಸುತ್ತುತ್ತಿತ್ತು. ದೇವ ಸಂದೇಶವಾಹಕರೊಂದಿಗಿನ ಜೀವನದ ಅಮೂಲ್ಯವಾದ ವರ್ಷಗಳನ್ನು ಕಳೆದ ಆ ಪವಿತ್ರ ನಗರವನ್ನು ಮರೆಯಲು ಅವರಿಗೆ ಸಾಧ್ಯವಾಗಿರಲಿಲ್ಲ. ಆದ್ದರಿಂದ ಮದೀನವನ್ನು ಸಂದರ್ಶಿಸಬೇಕೆಂಬ ಬಯಕೆ ತೀವ್ರವಾಗಿತ್ತು. ಒಂದು ರಾತ್ರಿ ಪ್ರವಾದಿಯವರ(ಸ) ಕನಸು ಕಂಡೊಡನೆ ಕೂಡಲೇ ಮದೀನಾಕ್ಕೆ ಹೋಗಲು ತೀರ್ಮಾನಿಸಿದರು. ಹೀಗೆ ಮದೀನ ತಲುಪಿ ಪ್ರವಾದಿಯವರ(ಸ) ಅಂತ್ಯ ವಿಶ್ರಾಂತಿಯ ಸ್ಥಳವನ್ನು ಸಂದರ್ಶಿಸಿ, ಗೆಳೆಯರೊಂದಿಗಿನ ಸಂಬಂಧವನ್ನು ಊರ್ಜಿತಗೊಳಿಸಿದರು. ಇಸ್ಲಾಮ್‌ಗಾಗಿ ಬಹಳ ಹಿಂಸೆ ದೌರ್ಜನ್ಯಗಳನ್ನು ಅನುಭವಿಸಿದ ಆ ದೇವದಾಸನ ತುಂಬಿದ ಕಣ್ಣುಗಳು ಹಾಗೂ ಬಿಕ್ಕಳಿಸುವ ಮನ ಹಾಗೂ ಕಂಪಿಸುವ ಹೃದಯದೊಂದಿಗೆ ಪ್ರವಾದಿಯ ಪಟ್ಟಣಕ್ಕೆ ವಿದಾಯ ಕೋರಿದರು.

ಕೆಲವೇ ದಿನಗಳಲ್ಲಿ ಬಿಲಾಲ್ ರೋಗಪೀಡಿತರಾದರು. ಅವರಿಗೆ ತನ್ನ ಅಂತ್ಯ ಸಮೀಪಿಸಿದೆ ಯೆಂದು ಮನವರಿಕೆಯಾಯಿತು. ಆದ್ದರಿಂದ ಅವರು ಎಂದಿಗಿಂತಲೂ ಆನಂದ ತುಂದಿಲ ರಾಗಿದ್ದರು. ರೋಗ ಶಯ್ಯೆಯಲ್ಲಿದ್ದ ಪತಿಯನ್ನು ಕಂಡು ಅಳುತ್ತಿದ್ದ ಪತ್ನಿಯೊಡನೆ, ಬಿಲಾಲ್(ರ) ತನ್ನ ಮನದಿಂಗಿತವನ್ನು ಹೀಗೆ ವ್ಯಕ್ತಪಡಿಸಿದರು: 'ಪ್ರಿಯೆ! ನೀನು ಅಳುವುದೇಕೆ? ನಿನ್ನನ್ನು ನಾನು ಅಗಲುತ್ತಿರುವುದು ನಿಜ. ಆದರೆ ನನ್ನ ದೃಷ್ಟಿಯಲ್ಲಿ ಅಗಲಿಕೆ ಹಾಗೂ ವಿರಹ ವೇದನೆಯು ಕೊನೆಗೊಳ್ಳುತ್ತಿವೆ. ನಾಳೆ ನಾನು ನನ್ನ ಸಂಗಡಿಗರನ್ನು ಭೇಟಿಯಾಗುತ್ತೇನೆ. ಪ್ರವಾದಿ ಮತ್ತು ಅನುಚರರನ್ನು ಕಾಣುತ್ತೇನೆ.'

ಹಿಜರಿ ಶಕ 20ರಲ್ಲಿ 63ನೆಯ ವಯಸ್ಸಿನಲ್ಲಿ ಬಿಲಾಲ್(ರ) ಇಹಲೋಕಕ್ಕೆ ವಿದಾಯ ಕೋರಿದರು. ಅವರ ಶರೀರವನ್ನು ಸಿರಿಯಾದಲ್ಲಿ ದಫನ ಮಾಡಲಾಯಿತು. ಆದರೆ ಮರ್ದಿತ

ಜನಕೋಟಿಯ ವಿಮೋಚನೆಯ ಪ್ರತೀಕವಾದ ಆ ಇತಿಯೋಪಿಯಾದ ಇತಿಹಾಸವನ್ನು ಅರಗಿಸಲು ಆರಡಿ ಮಣ್ಣಿಗೆ ಹೇಗೆ ಸಾಧ್ಯವಾದೀತು? ಪ್ರವಾದಿ ಮುಹಮ್ಮದ್‌ರಿಂದ(ಸ) ಸುವಾರ್ತೆ ಲಭಿಸಿದ ಹಾಗೂ ಅಜ್ಞಾನ, ಅಂಧಕಾರದ ಯುಗದಲ್ಲಿ ಸತ್ಯವಿಶ್ವಾಸದ ದಿವ್ಯ ಪ್ರಕಾಶವನ್ನು ಭದ್ರವಾಗಿ ಹಿಡಿದು, ವಿಶ್ವಾಸಿಗಳ ಮನದಲ್ಲಿ ಶಾಂತಿ ಸಮಾಧಾನದ ಪ್ರಭೆಯನ್ನು ಬೆಳಗಿಸಿದ, ಅಲ್ಲದೆ ಕಾಲದ ಮನೆ ಮಹಡಿಯಲ್ಲಿ ಪ್ರಜ್ವಲವಾಗಿ ಉದಿಸಿದ ಕಪ್ಪು ಮುತ್ತಾಗಿ ಅವರು ಎಂದೆಂದೂ ಅಮರರಾಗಿದ್ದಾರೆ.

ಆ ಸಜ್ಜನ ದೇವದಾಸನೊಂದಿಗೆ ಅಲ್ಲಾಹನು ನಮ್ಮನ್ನೂ ಅವನ ಅನುಗ್ರಹಿತ ಸ್ವರ್ಗದಲ್ಲಿ ಸೇರಿಸಲಿ.